Photo by Pranlal K. Patel



ಬಹುಮಾನ
ಪಡೆದ ಶೀರ್ಷಿಕೆ

ಗೃಹಗಳನ್ನು ದಾಟುತ್ತಾ

ಕಳಿಸಿದವರು:
ಎಸ್. ವಿಶ್ವನಾಥ, ಶ್ರೀರಂಗಪಟ್ಟಣ

ಬೆಂಗಳೂರು · ಮೈಸೂರು · ದಾವಣಗೆರೆ

ಗೀತಾ · ಚಾಮುಂಡೇಶ್ವರಿ · ಶಾಂತಿಪಿಕ್ಚರ್‌ಹೌಸ್

ಮಂಗಳೂರು · ಶಿವಮೊಗ್ಗಾ

ರೂಪವಾಣಿ · ಕೃಷ್ಣಾ

ಚಿತ್ರಮಂದಿರಗಳಲ್ಲಿಯೂ ಮತ್ತು ಸಂಸ್ಥಾನದ ಇತರ ಕೇಂದ್ರಗಳಲ್ಲಿಯೂ

26-2-53 ರಿಂದ



ಮಹಾತ್ಮಾ ಪಿಕ್ಚರ್ಸ್ ರವರ

# ದಳ್ಳಾಳಿ

ಕನ್ನಡ

ಹರಿಣಿ..ಪ್ರತಿಮಾದೇವಿ
ಮಹಾಬಲರಾವ್ ರಾಘವೇಂದ್ರರಾವ್
ಸುಬ್ಬಯ್ಯನ್...ಸಿಂಹ ಶ್..ಮಾಧವರಾವ್

*Producer & Director*
**SHANKAR SINGH..**

ಕವಿ ಹುಣಸೂರು

a **TALLAM** *Release*

## ಈ ಸಂಚಿಕೆಯಲ್ಲಿ



ಇವಲ್ಲದೆ ನಗಹನಿ, ಚುಟಕ, ಸ್ಪರ್ಧೆ, ಮೊದಲಾದುವೂ ಇವೆ.

# ನಂಬಿಕೆಗೆ ಅರ್ಹತೆ! ....

ಅತ್ಯುತ್ತಮ ಟಾಯಿಲೆಟ್ ಸಾಬೂನಿನಲ್ಲಿ

ನೀವು ಏನೇನು ಗುಣಗಳನ್ನು

ಅಪೇಕ್ಷಿಸುವಿರೊ ಅವೆಲ್ಲಾ

## ಮೈಸೂರು ಸ್ಯಾಂಡಲ್ ಸೋಪಿನಲ್ಲಿ

ಇರುವುವು ಎಂದು ಖಚಿತವಾಗಿ ಹೇಳುತ್ತೇವೆ.

ಎಲ್ಲಾ ಕಡೆಗಳಲ್ಲೂ ದೊರಕುವುದು.

## ಗವರ್ನ್‌ಮೆಂಟ್ ಸೋಪ್ ಫ್ಯಾಕ್ಟರಿ, ಬೆಂಗಳೂರು.




# ಆರೋಗ್ಯ ಪ್ರದಾಯಿನಿ

ಜೀವಾಮೃತ ಸೇವನೆಯಿಂದ ಬಲಹೀನರಿಗೆ ಬಲವನ್ನೂ, ದುರ್ಬಲರಿಗೆ ಒಳ್ಳೇಸತ್ವವನ್ನೂ, ನಿದ್ರಾಹೀನರಿಗೆ ಸುಖನಿದ್ರೆಯನ್ನೂ, ನರಗಳ ಸೆಳತಕ್ಕೆ ಖಂಡ ಪುಷ್ಟಿಯನ್ನೂ, ಜ್ಞಾಪಕಶಕ್ತಿ ಇಲ್ಲದವರಿಗೆ ಜ್ಞಾಪಕಶಕ್ತಿಯನ್ನೂ, ಜೀರ್ಣಶಕ್ತಿ ಇಲ್ಲದವರಿಗೆ ಜೀರ್ಣಶಕ್ತಿಯನ್ನೂ, ರಕ್ತಹೀನರಿಗೆ ರಕ್ತಪುಷ್ಟಿಯನ್ನೂ, ತೇಜೋಹೀನರಿಗೆ ತೇಜಸ್ಸನ್ನೂ, ಮಂದಬುದ್ಧಿಗಳಿಗೆ ಉಲ್ಲಾಸವನ್ನೂ, ಇನ್ನೂ, ಅಸಂಖ್ಯಾತವಾದ ಎಷ್ಟೋ ಸುಗುಣಗಳನ್ನೂ ಉಂಟು ಮಾಡುತ್ತದೆ. ಸ್ತ್ರೀ-ಪುರುಷರು ವಯೋ ಭೇದವಿಲ್ಲದೆ ಎಲ್ಲಾ ಋತುಗಳಲ್ಲಿಯೂ ಸೇವಿಸಬಹುದು.

## ಜೀವಾಮೃತ

ಖಂಡಪುಷ್ಟಿಗೆ - ವೀರ್ಯವೃದ್ಧಿಗೆ ಜವಸತ್ವಗಳಿಗೆ

ಎಲ್ಲಾ ಕೆಮಿಸ್ಟರಲ್ಲಿಯೂ, ಸ್ಟೋರುಗಳಲ್ಲಿಯೂ ದೊರೆಯುವುದು.

**ಆಯುರ್ವೇದಾಶ್ರಮಂ ಲಿಮಿಟೆಡ್,**

**ಮದರಾಸು - ೧೭.**

# ಚಂದಮಾಮ

**ಹೊಸ** ವರ್ಷದ ಚಂದಮಾಮನನ್ನು ಎಲ್ಲರೂ ಹೊಸ ಉತ್ಸಾಹದಿಂದ ಆದರಿಸುತ್ತಾರೆಂಬುದಕ್ಕೆ ನಮಗೆ ಬರುತ್ತಿರುವ ನೂರಾರು ಪತ್ರಗಳೂ, ಲೇಖನಗಳೂ ಸಾಕ್ಷಿ. ಉತ್ಸಾಹದ ಭರದಲ್ಲಿ ಹಲವರು ಮಗು ಮಾತುಗಳನ್ನೂ ಬಾಲರೇಖೆಗಳನ್ನೂ ಗೀಚಿ ಕಳುಹಿಸುತ್ತಿದ್ದಾರೆ. ಅವುಗಳನ್ನು ನೋಡುವಾಗ ಮಗುವಿನ ತಪ್ಪು ಮಾತುಗಳಂತೆ ಮುದ್ದುಮುದ್ದಾಗಿ ಕಂಡರೂ ಪ್ರಕಟಿಸಲು ಯೋಗ್ಯವಲ್ಲ. ಎಲ್ಲರಿಗೂ ಬೇರೆ ಬೇರೆ ಉತ್ತರ ಬರೆಯುವುದೂ ಅಸಾಧ್ಯ. ಅವರಿಗೆಲ್ಲಾ ಚಂದಮಾಮನ ತುಂಬು ಹೃದಯದ ಅಭಿನಂದನೆಗಳು. ಅಂತಹವರಿಗೆಲ್ಲಾ ಬೇರೆ ಬೇರೆ ಉತ್ತರ ಬರೆದಿಲ್ಲವೆಂದು ಬೇಸರಿಸದೆ, ಸೋಲೇ ಗೆಲುವಿನ ಮೆಟ್ಟಲೆಂಬುದನ್ನರಿತು, ಉತ್ಸಾಹದಿಂದ ಕಾರ್ಯೋನ್ಮುಖರಾಗಬೇಕೆಂಬುದು ನಮ್ಮ ಸಲಹೆ.

ಹೆಚ್ಚಾಗಿ ಅನೇಕರು ಸ್ವತಂತ್ರ ಕೃತಿಕರಚನೆ ಮಾಡುವುದಿಲ್ಲ. ನಮಗೆ ಬರುವ ಲೇಖನಗಳಲ್ಲಿ ಪ್ರಕಟನೆಗೆ ಯೋಗ್ಯವಾದುವು ಕೊಂಚಮಾತ್ರ. ಅವುಗಳನ್ನು ಯಥಾವಕಾಶವಾಗಿ ಪ್ರಕಟಿಸುತ್ತಾ ಬರುತ್ತೇವೆ. ಯಾರೂ ಆತುರಪಡಬಾರದು. ತಾಳ್ಮೆ ವಹಿಸಬೇಕು.

ಸಂಪುಟ ೧೦ : ಮಾರ್ಚಿ ೧೯೫೩ : ಸಂಚಿಕೆ ೩



SANKAR



# ಮುಳ್ಳು - ಹೂವು

ಚೆಲುವೇರಿಬ್ಬರು ಹುಡುಗೇರಿದ್ದರು
ಚೆಲುವಾದೊಂದು ಊರಲ್ಲಿ
ಸುಖವಾಗೊಡಗೂಡಾಡುತಲಿದ್ದರು
ಅಕ್ಕತಂಗೇರಾಗಲ್ಲಿ.

ಇಬ್ಬರು ನೋಡಲು ಒಂದೇ ರೀತಿ
ಒಂದೇ ಅಚ್ಚಲಿ ಹೊಯ್ದಂತೆ,
ಗುಣ ನಡತೆಯಲ್ಲಿ ತುಂಬಾ ಭೇದ
ಹಗಲಿಗು ಇರುಳಿಗು ಇರುವಂತೆ.

ಹಿರಿಯವಳಿಗೆ ದಯದಾಕ್ಷಿಣ್ಯಗಳು
ಕೊಂಚವಾದರೂ ಇರಲಿಲ್ಲ.
ಮಾತಾಡಿದರೇ ಜಗಳ ಮಾಡುವಳು
ಸಿಡುಕಿ, ಸಹನೆ ಏನೇನಿಲ್ಲ.

ಕಿರಿಯಳು ತುಂಬಾ ಒಳ್ಳೆಯ ಹುಡುಗಿ
ಸಿಡುಕು. ದುಡುಕು ಸಲ್ಪೂ ಇಲ್ಲ.
ಸಹನಶೀಲೆ, ಕೆಲಸವ ಹೇಳಿದರೆ
'ನಾನೊಲ್ಲೇ' ಎಂಬವಳಲ್ಲ.

ಒಂದಿನ ನೀರಿಗೆ ಬಿಂದಿಗೆಯೊಂದಿಗೆ
ಹೊರಟರಾ ಅಕ್ಕತಂಗಿಯರು
ಸುಂದರವಾದಾ ಸಂಜೆಯ ವೇಳ್ಯದಿ
ಬಾವಿಯಕಡೆ ನಡೆದರು ಅವರು.

ಬಾನದಿ ಇವರಾ ಚೆಲುವನು ನೋಡಿ
ದೇವತೆಯೊಬ್ಬಳು ತನ್ನೊಳಗೆ
'ಈ ಚೆಲುವೆಯರಾ ಗುಣ ಹೇಗುಂಟೊ
ಅರಿಯುವೆ ನಾನೀಕ್ಷಣದೊಳಗೆ



## "ನವಗಿರಿನಂದ"

ಹೀಗೆ ನೆನೆದು ಆ ದೇವಿ ಒಡನೆಯೇ
ಹಣ್ಮುದುಕಿಯ ರೂಪವಕೊಂಡು
ಬಾವಿಯ ಬಳಿಯಲಿ ನಡುಗುತ ನಿಂತಳು
'ಹಾ! ಹೂ!' ಎನುತವರನು ಕಂಡು

'ಬಾಯಾರಿಕೆ ನಾಲಗೆ ಒಣಗುತ್ತಿದೆ!
ಭಾಳ ಮುದುಕಿನಾ! ಬಲವಿಲ್ಲ!
ಬೊಗಸೆಗೆ ಕೊಂಚ ನೀರನು ಹೊಯ್ದು,
ಕಾಪಾಡಿ! ದಾಹ ತಾಳೋಲ್ಲ!'

ಎಂದಾ ಮುದುಕಿಯ ದೈನ್ಯವ ನೋಡಿ
ಅಕ್ಕನು ಬಲು ಬಲು ಸಿಡುಕಿಂದ,
'ಹೋಗೇ ಮುದುಕೀ! ನೀರ್ಬೇಕಾದರೆ,
ಸೇದೆ'ಂದಳು ನಿರ್ಭಿಡೆಯಿಂದ.

ಆದರೆ ಕರುಣಾಕರೆಯಾ ಕಿರಿಯಳು
ಆದರದಲಿ ನೀರನ್ನೆರೆದು,
ಅಜ್ಜಿಯ ಸಂತಸಗೊಳ್ಳಿಸಿ, ಮೆಚ್ಚಿಸಿ
ಒಲಿದಳೊಳ್ಳೆಯ ನುಡಿಯೊರೆದು.

ಮೆಚ್ಚಿ ಮುದುಕಿ, ನಿಜರೂಪವ ಧರಿಸಿ
ಅವರಿಬ್ಬರ ಇದಿರೇ ಎಸೆದು,
ಇಬ್ಬರ ಗುಣಗಳ ಮನದಲಿ ತೂಗಿ
ಹೀಗೆಂದೊರೆದಳು ವರತೆಗೆದು

'ದೊಡ್ಡ ಹುಡುಗಿ ತಾ ಮಾತಾಡುವಾಗ
ಮುಳ್ಳುಗಳೇ ಉದುರಲಿ ತುಂಬ!
ಚಿನ್ನ, ಸಣ್ಣವಳು ಮಾತಾಡುವಾಗ,
ಹೂವ್ವುಗಳುದುರಲಿ ಮನೆತುಂಬ!'







# ಮುಖ ಚಿತ್ರ

'ದ್ರೋಣರು ಅರ್ಜುನನಿಗೆ ಮಾತ್ರ ಅಕ್ಕರೆಯಿಂದ ಕಲಿಸುವರು. ನಮಗೆಲ್ಲ ಕಲಿಸುವುದಿಲ್ಲ' ಎಂಬುದೇ ದುರ್ಯೋಧನನ ದೂರಾಗಿತ್ತು. ಒಂದು ದಿನ ದ್ರೋಣರು ಕುರುಕುಮಾರರನ್ನೆಲ್ಲಾ ಕರೆದುಕೊಂಡು ಗಂಗಾನದಿಯ ಕಡೆಗೆ ಹೊರಟರು. ನಡುದಾರಿಯಲ್ಲಿ ಅರ್ಜುನನನ್ನು ಕುರಿತು, 'ನನಗೆ ಅಭ್ಯಂಜನ ಮಾಡಬೇಕು. ಎಣ್ಣೆಯನ್ನೂ ಓಕುಳಿಯನ್ನೂ ತೆಗೆದುಕೊಂಡು ಬಾ. ದಾರಿಯಲ್ಲಿ ಅವುಗಳನ್ನು ನೆಲದಮೇಲಿಡಬಾರದು' ಎಂದು ಕಟ್ಟು ಹೇಳಿ ಕಳುಹಿಸಿದರು.

ಅರ್ಜುನನು ಹೋದಮೇಲೆ, ದಾರಿಯಲ್ಲಿ ಒಂದು ಆಲದ ಮರದ ಬುಡದಲ್ಲಿ ದ್ರೋಣರು ನಿಂತರು. ದುರ್ಯೋಧನನನ್ನು ಕುರಿತು, 'ಈಗ ನಿನಗೊಂದು ಹೊಸ ವಿದ್ಯೆಯನ್ನು ಹೇಳಿಕೊಡುತ್ತೇನೆ' ಎಂದರು. ಬಳಿಕ ನೆಲದಲ್ಲಿ ಒಂದು ಚಕ್ರವನ್ನು ಬರೆದು, ಮಂತ್ರವನ್ನು ಉಪದೇಶಿಸಿ, ಬಾಣ ಬಿಡುವಂತೆ ಹೇಳಿದರು. ದುರ್ಯೋಧನನು ಬಿಟ್ಟ ಆ ಒಂದೇ ಬಾಣದಿಂದ ಆಲದ ಮರದ ಎಲೆಗಳಲ್ಲೆಲ್ಲಾ ಒಂದೊಂದು ತೂತಾಯಿತು.

ನಂತರ ಎಲ್ಲರೂ ಗಂಗಾನದಿಯನ್ನು ಸೇರಿದರು. ಸ್ವಲ್ಪಹೊತ್ತಿನಲ್ಲಿ ಅರ್ಜುನನು ಎಣ್ಣೆಯನ್ನೂ, ಓಕುಳಿಯನ್ನೂ ತಂದನು. ಎಣ್ಣೆ ಹಚ್ಚಿಕೊಂಡು ದ್ರೋಣರು ಗಂಗಾನದಿಯಲ್ಲಿ ಸ್ನಾನ ಮಾಡತೊಡಗಿದರು. ಕುರುಕುಮಾರರೆಲ್ಲಾ ಬೇರೊಂದೆಡೆ ಈಜಾಡುತ್ತಿದ್ದರು. ದ್ರೋಣರ ಬಳಿಯಲ್ಲಿ ಯಾರೂ ಇಲ್ಲ. ಆಗ ದ್ರೋಣರ ಕಾಲನ್ನು ಒಂದು ಮೊಸಳೆ ಹಿಡಿಯಿತು. ದ್ರೋಣರು ಮೊಸಳೆಯೊಡನೆ ಹೋರಾಡುತ್ತಾ ಕೂಗಿದರು. ದುರ್ಯೋಧನನೇ ಮೊದಲಾದವರು ಓಡಿಬಂದು ಕಲ್ಲು ಕೊರಡುಗಳಿಂದ ಬಿಡಿಸಲು ನೋಡಿದರು. ಸಾಧ್ಯವಾಗಲಿಲ್ಲ. ನಂತರ ದೂರದಲ್ಲಿದ್ದ ಅರ್ಜುನನಿಗೆ ತಿಳಿಯಿತು. ಅವನು ಓಡಿಬಂದು, ಒಂದು ಬಾಣವನ್ನು ಬಿಟ್ಟನು. ಆ ಮೊಸಳೆಯ ದೇಹವು ಚೂರುಚೂರಾಗಿಹೋಯಿತು. ನಂತರ ದ್ರೋಣರು ಸುಖವಾಗಿ ಸ್ನಾನ ಮುಗಿಸಿದರು.

ಹಿಂದಿರುಗಿ ಬರುತ್ತಾ ದಾರಿಯಲ್ಲಿರುವ ಆಲದ ಮರವನ್ನು ನೋಡಿದರು. ಒಂದೊಂದು ಎಲೆಯಲ್ಲಿ ಎರಡೆರಡು ತೂತಿತ್ತು-"ಇದನ್ನು ಯಾರು ಮಾಡಿದರು?" ಎಂದು ದ್ರೋಣರು ಕೇಳಿದರು. ಅರ್ಜುನನೆಂದ: "ನಾನು ಸ್ವಾಮಿ. ನಾನು ಎಣ್ಣೆ ಓಕುಳಿಗಳನ್ನು ತರುವಾಗ ಈ ಮರವನ್ನು ನೋಡಿದೆ. ಕೆಳಗಿರುವ ಚಕ್ರವನ್ನೂ ನೋಡಿದೆ. ಆದರಿಂದ ಮಂತ್ರದ ಸಾರವನ್ನು ಗ್ರಹಿಸಿ ಒಂದು ಬಾಣ ಬಿಟ್ಟೆ. ನಿಮ್ಮ ಕಟ್ಟಳೆಯಂತೆಯೇ, ಎಣ್ಣೆ—ಓಕುಳಿಗಳನ್ನು ಕೆಳಗೆ ಇಡಲಿಲ್ಲ; ಮೇಲಕ್ಕೆ ಹಾರಿಸಿದೆ. ಅವು ಕೆಳಗೆ ಬರುವುದರೊಳಗೆ ಬಾಣಬಿಟ್ಟು, ಅವುಗಳನ್ನು ಹಿಡಿದುಕೊಂಡೆ. ಎಲೆಯಲ್ಲೆಲ್ಲಾ ಇನ್ನೊಂದು ತೂತಾಯಿತು."

ದ್ರೋಣರು ಸಂತೋಷದಿಂದ—"ಹೌದು, ನೀನು ನನ್ನನ್ನು ಮೊಸಳೆಯಿಂದ ಕಾಪಾಡಿದಾಗಲೇ ನಾನು ಗ್ರಹಿಸಿದೆ. ದುರ್ಯೋಧನನು ಕಲಿತುದನ್ನು ಮರೆತುಬಿಟ್ಟಿದ್ದಾನೆ. ಎಷ್ಟು ಕಲಿತರೂ ಅವರವರ ಶಕ್ತಿ ಇದ್ದಷ್ಟೇ ಬರುತ್ತದೆ. ಅಸೂಯೆ ಪಡಬಾರದು" ಎಂದರು.

# ಪುನರ್ಜನ್ಮ



ಪೂರ್ವಕಾಲದಲ್ಲಿ, ಪರಮಪವಿತ್ರವಾದ ಪಂಡರಪುರದಲ್ಲಿ ಕಮಲಾಕರನೆಂಬ ಬ್ರಾಹ್ಮಣನಿದ್ದನು. ಅವನು ಸಕಲಶಾಸ್ತ್ರಗಳನ್ನೂ ಬಲ್ಲವನು. ಅವನ ಪತ್ನಿಯಾದ ಸುಮತಿ ಸದ್ಗುಣವತಿಯಾಗಿಯೂ, ಪತಿಗೆ ಅನುಕೂಲೆಯಾದ ಸತಿಯಾಗಿಯೂ ಇದ್ದಳು. ಅವರಿಗೆ ಪದ್ಮಾಕರನೆಂಬ ಸತ್ಪುತ್ರನು ಹುಟ್ಟಿದ್ದನು.

ಮೂವರೂ ಒಳ್ಳೆಯ ದೇವಭಕ್ತರು. ಇತರ ಭಕ್ತರನ್ನು ಪೂಜಿಸುವ ಗುಣವುಳ್ಳವರು. ಆದರೆ ಕಮಲಾಕರನು ಬಲು ಬಡವ. ಆದುದರಿಂದ ಉಂಛವೃತ್ತಿ (ಭಿಕ್ಷೆಬೇಡಿ) ಯಿಂದಲೇ ಜೀವನವನ್ನು ನಡೆಸಬೇಕಾಗಿತ್ತು.

ಒಂದು ದಿನ ಕಮಲಾಕರನು ಭಿಕ್ಷೆಗಾಗಿ ಹೋಗುತ್ತಿದ್ದಾಗ ದಾರಿಯಲ್ಲಿ ತುಕಾರಾಮ, ನಾಮದೇವ, ಕಬೀರ ಮೊದಲಾದ ಅನೇಕ ಮಂದಿ ಭಕ್ತರು ಅವನಿಗಿದಿರಾದರು.

ಅವರನ್ನು ನೋಡಿ ಕಮಲಾಕರನು ಬಹಳವಾಗಿ ಆನಂದಪಟ್ಟು—"ಅಯ್ಯಗಳಿರಾ! ಈ ದಿನವೇ ಸುದಿನ! ನೀವೆಲ್ಲರೂ ಒಂದೇಬಾರಿಗೆ ನನಗೆ ದರ್ಶನವೀಯುವುದು ನನ್ನ ಪೂರ್ವ ಪುಣ್ಯವಲ್ಲದೆ ಬೇರೇನು? ದಯಮಾಡಿ ಈಗ ನೀವೆಲ್ಲಾ ಬಂದು ನನ್ನ ಆತಿಥ್ಯವನ್ನು ಸ್ವೀಕರಿಸಿ, ನಮ್ಮನ್ನು ಧನ್ಯನನ್ನಾಗಿ ಮಾಡಬೇಕು" ಎಂದು ಪ್ರಾರ್ಥಿಸಿಕೊಂಡನು.

ಆದಕ್ಕೆ ಅವರು-"ಅಯ್ಯಾ, ನಿನ್ನ ಆದರಣೆಗಾಗಿ ನಾವು ಬಹಳವಾಗಿ ಸಂತೋಷಿಸಿದೆವು. ಆದರೆ ಪಾಪ, ನಿನಗೆ ಅನುಕೂಲತೆ ಬಹಳ ಕಡಮೆ. ಉಂಛವೃತ್ತಿಯಿಂದಲೇ ನಿನ್ನ ಕುಟುಂಬ ಕಾಲಕ್ಷೇಪವಾಗಬೇಕಾಗಿದೆ. ನಾವೋ ಬಹಳಮಂದಿ ಇದ್ದೇವೆ. ನಮ್ಮೆಲ್ಲರನ್ನೂ ಹೇಗೆ ಉಪಚರಿಸುತ್ತಿ? ಬೇಡಯ್ಯಾ. ತೊಂದರೆಗೊಳಗಾಗಬೇಡ. ನಿನ್ನಅಭಿಮಾನವೇ ನಮಗೆ ಸಾಸಿರವಾಯಿತು" ಎಂದರು.

ಇದನ್ನು ಕೇಳಿ ಕಮಲಾಕರನು ಬಹಳ ಖಿನ್ನನಾಗಿ—"ಅಯ್ಯಗಳಿರಾ! ನೀವು ಹೇಳುವಂತೆ ನಾವು ಬಡವರೇನೋ ನಿಜವೇ. ಆದರೆ ನನ್ನ

ಎಸ್. ವೆಂಕಟಪ್ಪ, ಶಿವಮೊಗ್ಗ




ಜನನೀ ಜನಕರಾದ ರಕ್ಮಿಣೀ ಕೃಷ್ಣನು ಮಹ ದೈಶ್ವರ್ಯ ಸಂಪನ್ನನಲ್ಲವೆ? ಅವನ ಕೃಪೆ ಇರುವ ವರೆಗೂ ನನಗೆ ಯಾವ ತೊಂದರೆಯೂ ಬಾರದು. ಆದುದರಿಂದ ದಯೆಯಿಟ್ಟು ನಿರಾ ಕರಿಸಬೇಡಿ. ನನ್ನನ್ನು ಅನುಗ್ರಹಿಸಿರಿ" ಎಂದು ದೀನವಾಗಿ ಬೇಡಿಕೊಂಡನು.

ಅವನ ದೈವಭಕ್ತಿಯನ್ನು ನೋಡಿ ಆ ಭಕ್ತರು ಬಹಳ ಸಂತೋಷಪಟ್ಟು—

"ಸರಿ, ಕಮಲಾಕರ, ನಾವು ಚಂದ್ರಭಾಗಾ ನದಿಗೆ ಹೋಗಿ ಸ್ನಾನ ಸಂಧ್ಯಾದಿಗಳನ್ನು ನೆರ ವೇರಿಸಿಕೊಂಡು ಬರುತ್ತೇವೆ. ನೀನು ಮನೆಗೆ ಹೋಗಿ ತಕ್ಕ ಪ್ರಯತ್ನ ಮಾಡಿ ಸಿದ್ಧನಾಗಿರು" ಎಂದು ಹೇಳಿ ಹೊರಟರು.

ಕಮಲಾಕರನು ಅತ್ಯಾನಂದದಿಂದ ಮನೆಗೆ ಬಂದು ಪತ್ನಿಯೊಡನೆ ಈ ಸಂಗತಿಯನ್ನು ಹೇಳಿದನು. ಅವಳಿಗೂ ಬಹಳ ಸಂತೋಷ ವಾಯಿತು. ತತ್ ಕ್ಷಣವೇ ಅವಳು ತನ್ನ ಸ್ನೇಹಿ ತೆಯರ ಮನೆಗೆ ಹೋಗಿ ಬೇಕಾದ ಪದಾರ್ಥ ಗಳನ್ನೆಲ್ಲ ಕೈಗಡವಾಗಿ ತಂದು, ಅಡುಗೆಗೆ ಪ್ರಾರಂಭಿಸಿದಳು.

ಅಡುಗೆ ಪೂರಾ ಮುಗಿಯುವ ಮೊದಲೇ ಕಟ್ಟಿಗೆ ಮುಗಿದುಹೋಯಿತು. ಅವಳು ಮಗನನ್ನು ಕರೆದು—"ಮಗೂ, ಕಟ್ಟಿಗೆ ಮುಗಿದುಹೋಯಿತು. ಆ ಮೂಲೆಯಿಂದ ನಾಲ್ಕು ಬೆರಣಿಗಳನ್ನು ಬೇಗನೇ ತಾ" ಎಂದಳು.

ಅವನು ಬೇಗ ಬೇಗನೇ ಹೋಗಿ ಬೆರಣಿ ಗಳನ್ನು ತೆಗೆಯುವಾಗ, ಅದರೊಳಗೆ ಸೇರಿ ಕೊಂಡಿದ್ದ ಒಂದು ಸರ್ಪವು ಅವನನ್ನು ಕಚ್ಚಿ ಬಿಟ್ಟಿತು. ಅವನು "ಅಮ್ಮಾ—" ಎಂದು ಕೂಗಿ ಕೆಳಗೆ ಬಿದ್ದು ಪ್ರಾಣ ಬಿಟ್ಟನು.

ಆ ಕೂಗು ಕೇಳುತ್ತಲೇ ತಾಯಿ ಈಚೆಗೆ ಬಂದು ನೋಡಿದಳು. ಒಂದು ನಿಮಿಷ ನಿಶ್ಚೇ ಷ್ಟಿತೆಯಾದಳು. ಬಳಿಕ ಕೆಳಗೆ ಬಿದ್ದಿದ್ದ ಮಗನ ಶರೀರವನ್ನು ಮುಟ್ಟಿನೋಡಿ, ಮಗನು ಸತ್ತು ಹೋಗಿದ್ದಾನೆಂದು ಅರಿತಳು. ಆಗ ಕಮಲಾ ಕರನೂ ಬಂದನು....

ಆದರೆ ಅದು ದುಃಖಿಸುತ್ತಾ ಕುಳಿತು ಕೊಳ್ಳುವ ಸಮಯವಲ್ಲ. ಅತ್ತ ಸಾಧುಗಳಿ

ಗಾಗಿ ತೊಡಗಿದ ಆರಾಧನೆ ನಿಂತುಹೋಗುವುದಲ್ಲಾ! ಆದುದರಿಂದ ಅವರು ದುಃಖವನ್ನು ನುಂಗಿಕೊಂಡು ಕುಮಾರನ ಕಳೇಬರವನ್ನು ಒಂದು ಮೂಲೆಯಲ್ಲಿ ಮಲಗಿಸಿದರು. ಸುಮತಿ ಅಡುಗೆಯನ್ನು ಪೂರ್ತಿಗೊಳಿಸಿ, ಅತಿಥಿಗಳನ್ನು ಇದಿರು ನೋಡುತ್ತಿದ್ದಳು. ಹಾಗೆಯೇ ಕಮಲಾಕರನೂ, ದುಃಖವನ್ನು ನುಂಗಿಕೊಂಡು ನಿರೀಕ್ಷಿಸುತ್ತಿದ್ದನು.

ಇಷ್ಟರಲ್ಲಿ ಆ ಭಕ್ತರು ಸ್ನಾನಾದಿ ಕಾರ್ಯಗಳನ್ನು ಮುಗಿಸಿಕೊಂಡು, ಭಗನ್ನಾಮ ಸಂಕೀರ್ತನೆ ಮಾಡುತ್ತಾ ಕಮಲಾಕರನ ಮನೆಗೆ ಬಂದರು. ಕಮಲಾಕರನು ಅವರನ್ನು ಅತ್ಯಂತ ಭಕ್ತಿಯಿಂದ ಕರೆದುಕೊಂಡು ಬಂದು, ಭೋಜನಕ್ಕೆ ಕುಳಿತುಕೊಳ್ಳುವಂತೆ ಪ್ರಾರ್ಥಿಸಿಕೊಂಡನು.

ಭೋಜನಕ್ಕೆ ಕುಳಿತುಕೊಳ್ಳುವ ಮುಂಚೆ ಆ ಭಕ್ತರು ಶ್ರೀ ಕೃಷ್ಣನಿಗೆ ಆಹ್ವಾನವಿತ್ತು ಬೇಡಿಕೊಂಡರು. ಕೃಷ್ಣನು ಬರಲಿಲ್ಲ. ಆಗ ಅವರು ತಮ್ಮ ದಿವ್ಯದೃಷ್ಟಿಯಿಂದ ಎಲ್ಲವನ್ನೂ ಅರಿತುಕೊಂಡರು. ಕೂಡಲೇ ಕಮಲಾಕರನನ್ನು ಕುರಿತು—"ನಿನ್ನ ಕುಮಾರನನ್ನೂ ಕರೆ. ಎಲ್ಲರೂ ಒಟ್ಟಿಗೇ ಕುಳಿತುಕೊಳ್ಳೋಣ" ಎಂದನು ನಾಮದೇವ. ಕಮಲಾಕರನು ಏನು ತಾನೇ ಹೇಳಬೇಕು?



ಮೃತದೇಹ ಮನೆಯಲ್ಲಿದ್ದರೆ ಅವರು ಊಟ ಮಾಡಲಾರರಲ್ಲಾ! "ಅಯ್ಯಾ, ಅವನು ಆಗಲೇ ಊಟಮಾಡಿ ಮಲಗಿದನು" ಎಂದು ಹೇಳಿ, ತಪ್ಪಿಸಿಕೊಳ್ಳಲಿಕ್ಕೆ ನೋಡಿದನು.

"ಹಾಗಲ್ಲ, ಆ ಹುಡುಗ ಬಂದು ಪಙ್ತಿಯಲ್ಲಿ ಕೂತರೆ ಹೊರತು ನಾವು ಊಟ ಮಾಡುವುದಿಲ್ಲ" ಎಂದರು ಎಲ್ಲ ಸಾಧುಗಳೂ.

ಕಮಲಾಕರನಿಗೆ ಏನೂ ತೋರಲಿಲ್ಲ. ಕರುಣಾಕರನಾದ ಪುಂಡರೀಕಾಕ್ಷನನ್ನೇ ಧ್ಯಾನ ಮಾಡಿದನು. ಆಗ ಪುಂಡರೀಕವರದನು ಪ್ರತ್ಯಕ್ಷನಾಗಿ "ಭಕ್ತನೇ, ನಿನಗೇನು ಬೇಕು?" ಎಂದು ಕೇಳಿದನು.

ಕಮಲಾಕರನು—"ಪ್ರಭೋ! ನನ್ನ ಮನೆಗೆ ಅಪೂರ್ವವಾಗಿ ಎಷ್ಟೋ ಅತಿಥಿಗಳು ಬಂದಿದ್ದಾರೆ. ಇವರೆಲ್ಲಾ ಮಹಾತ್ಮರು. ನನ್ನ ಮಗನು ಪಙ್ತಿಗೆ ಬಂದ ಹೊರತು ಊಟ ಮಾಡಲಾರೆವೆಂದು ಹಟಹಿಡಿದಿದ್ದಾರೆ. ದಯಾಮಯಾ! ಕಾರ್ಯವು ನಿರ್ವಿಘ್ನವಾಗಿ ನೆರವೇರಿಸುವುದು ನಿನ್ನ ಕೈಯಲ್ಲಿದೆ! ಸ್ವಾಮಿ! ಇದೇ ನನ್ನ ಕೋರಿಕೆ" ಎಂದು ಬೇಡಿಕೊಂಡನು.

ಶ್ರೀಹರಿ "ಸರಿ, ನಿನ್ನ ಕೋರಿಕೆ ಈಡೇರಲಿ" ಎಂದು ವರವಿತ್ತು ಅಂತರ್ಧಾನನಾದನು. ಆಗಲೇ ಅತ್ತ ಪದ್ಮಾಕರನು ನಿದ್ರೆಯಿಂದೆದ್ದವನಂತೆ, "ಅಮ್ಮಾ, ದಾಹ...." ಎನ್ನುತ್ತಾ ಆ ಭಕ್ತರು ಕುಳಿತಿದ್ದಲ್ಲಿಗೆ ಬಂದು, ಎಲ್ಲರಿಗೂ ನಮಸ್ಕರಿಸಿದನು.

ಸುಮತಿ ಆನಂದದಿಂದ ಅವನನ್ನು ಅಪ್ಪಿಕೊಂಡು,—"ಮಹಾತ್ಮರೆ! ನಿಮ್ಮ ಅನುಗ್ರಹದಿಂದಲೇ ನನ್ನ ಮಗು ಮತ್ತೆ ಬದುಕಿತು. ನೀವೇ ಭಗವತ್ಸ್ವರೂಪರು" ಎಂದು ಅನೇಕ ವಿಧವಾಗಿ ಸ್ತುತಿಸಿ ತನ್ನ ಸಂತೋಷವನ್ನು ಪ್ರಕಟಿಸಿದಳು.

ಅನಂತರ ಆ ಸಾಧುಗಳು ಸುಗುಣಿ ಪದ್ಮಾಕರನನ್ನು ನಡುವೆ ಕುಳ್ಳಿರಿಸಿಕೊಂಡು, ಪರಮಾನಂದದಿಂದ ಭೋಜನ ಮಾಡಿದರು. ಅವರು ಭಕ್ತಶಿರೋಮಣಿಯಾದ ಕಮಲಾಕರನನ್ನು ಎಷ್ಟೋ ಶ್ಲಾಘಿಸಿ, ಆ ಮೂವರಿಗೂ ಪರಮಪವಿತ್ರವಾದ ತಾರಕ ಮಂತ್ರವನ್ನು ಉಪದೇಶಿಸಿ ತೃಪ್ತಿಪಡಿಸಿ, ಭಜನೆ ಮಾಡುತ್ತಾ ಹೊರಟುಹೋದರು.






## 4

ಆಗ ತೇಕುತ್ತಾ ಒಬ್ಬ ಸೇವಕನು ಬಂದು, "ಪ್ರಭೂ! ಕಿರಾತರಾಜನೂ, ಭಾನುತೇಜನೂ ಸತ್ತುಹೋದರು !!" ಎಂದು ಹೇಳಿದನು.

ಈ ಮಾತನ್ನು ಕೇಳುತ್ತಲೇ, ರಾಜಗುರು ಏನೋ ದೊಡ್ಡ ಪೀಡೆ ಕಳೆದುಹೋದಂತೆ "ಸತ್ತರೆ? ಹೋಗಲಿ!" ಎಂದೆಂದು "ಆ ಹುಡುಗ ಶನಿಯನ್ನು ಕೂಡಾ ಹುಡುಕಿ ಹಿಡಿಯಿರಿ!" ಎಂದು ಎಚ್ಚರಿಕೆ ಕೊಟ್ಟನು. ಅಷ್ಟರಲ್ಲಿ ಯುದ್ಧರಂಗದಿಂದ ಎರಡು ಕಳೇಬರಗಳನ್ನೂ ಸಿಪಾಯಿಗಳು ಹೊತ್ತು ತಂದರು.

ರಾಜಗುರು ಹಾಗೆಂದುದಕ್ಕೆ ಮಂದಪಾಲನು ಮನಸ್ಸಿನಲ್ಲಿಯೇ ತುಂಬಾ ಖೇದಪಟ್ಟನು. ಆದರೆ ಏನೂ ಹೇಳಲಾರದೆ ಹೋದನು. ತಂದೆಯ ಮರಣಕ್ಕಾಗಿ ತುಂಬಾ ವ್ಯಸನಪಟ್ಟನು. ಇದನ್ನು ರಾಜಗುರು ಕಂಡುಹಿಡಿಯದೆ ಹೋಗಲಿಲ್ಲ. ಮಂದಪಾಲನಿಗೆ ತಂದೆಯ ಮೇಲೆ ಮಮತೆಯುಂಟಾಗುವುದನ್ನು ನೋಡಿ ಅವನಿಗೆ ಮಗನ ಮೇಲೆ ವಿರಕ್ತಿಯುಂಟಾಯಿತು.

ಈ ವಾರ್ತೆ ಕಿವಿಗೆ ಬೀಳುತ್ತಲೇ ಸೆರೆಮನೆಯಲ್ಲಿದ್ದ ಪ್ರಮೋದನಿಗೆ ಎದೆಯೊಡೆದಂತಾಯಿತು. ಭಾನುತೇಜನ ಹೆಂಡತಿ ಸ್ಮೃತಿ ತಪ್ಪಿ ಬಿದ್ದಳು

ಆ ಯುದ್ಧದಿಂದುಂಟಾದ ಮರಣವಾರ್ತೆಗಳನ್ನು ಕೇಳಿ, ಸಾಮಂತರೊಳಗೆಲ್ಲಾ ಹೆಚ್ಚಿಗೆ ದುಃಖಪಟ್ಟವನು ಅಮರಭೂಪತಿ ಹೌದು ಮತ್ತೆ—ಅವನ ಮಗಳೇ ಸೆರೆಯುಲ್ಲಿದ್ದಾಳೆ! ಹಸುಕಂದನು ಕಾಣಲಾರದೆ ಹೋಗಿದ್ದಾನೆ!! ಅಳಿಯನು ಅರ್ಧಾಂತರದಲ್ಲೇ ಸತ್ತುಹೋಗಿದ್ದಾನೆ!!! ಇದಕ್ಕಿಂತ ದುಃಖಕರವಾದ ಘಟನೆ ಬೇರೇನಿದೆ? ಇಷ್ಟು ದುಃಖದಲ್ಲಿ ಮುಳುಗಿದ್ದ ಅವನು ಪಟ್ಟಾಭಿಷೇಕದ ಉತ್ಸವದಲ್ಲಿ ಕಲೆತು



ಕೊಳ್ಳುವದು ಹೇಗೆ? ಆದರೂ ನಾಲ್ವರೊಂದಿಗೆ ಸೇರದೆ ಇರಲಿಕ್ಕಾಗುತ್ತದೆಯೆ? ಏನಿದ್ದರೂ ಅವನ ಶರೀರವೇ ಇಲ್ಲಿತ್ತಲ್ಲದೆ, ಮನಸ್ಸು ಇರಲೇ ಇಲ್ಲ! ಹೇಗಿದ್ದೀತು ಪಾಪ!

ಏನಾದರೂ ಸರಿ, ಪಟ್ಟಾಭಿಷೇಕ ನಡೆದೇ ತೀರಲಿ ಎಂದು ರಾಜಗುರು ಚಕಚಕನೆ ಅದರ ಏರ್ಪಾಡಿಗೆ ತೊಡಗಿದನು. ಈ ಸಂಧಿಗ್ಧ ಸಮಯದಲ್ಲಿ ಮಗಧ ರಾಜ್ಯದಿಂದ ಒಬ್ಬ ಸೇವಕನು ಬಂದು, ಅಮರಭೂಪತಿಯ ತಂದೆ ಸತ್ತುಹೋದನೆಂದು ವರ್ತಮಾನ ಕೊಟ್ಟನು.

ಕಷ್ಟದಮೇಲೆ ಕಷ್ಟವು ಬಿದ್ದು, ಅಮರಭೂಪತಿ ಬಹಳ ದುಃಖಿಸಿದನು. ಬಳಿಕ ರಾಜಗುರು ಮತ್ತು ಮಂದಪಾಲರ ಬಳಿಯಿಂದ ಅನುಮತಿ ಪಡೆದುಕೊಂಡು, ತನ್ನ ರಾಜ್ಯಕ್ಕೆ



ಹಿಂದಿರುಗಿ ಹೋದನು. ಆದರೆ ಅವನ ಮನಸ್ಸೆಲ್ಲಾ ಮೊಮ್ಮಗನ ಮೇಲೇ ಇತ್ತು.

ಹೆಸರಿಗೆ ಮಾತ್ರ ಪಟ್ಟಾಭಿಷೇಕವೆಂಬಂತೆ ಮಂದಪಾಲನಿಗೆ ಪಟ್ಟಾಭಿಷೇಕವು ಜರುಗಿತು. ಬಂದವರೆಲ್ಲಾ ಹೊರಟು ಹೋದರು.

ಈ ಪಟ್ಟಾಭಿಷೇಕವು ಪ್ರಜೆಗಳಿಗೆಲ್ಲಾ ಇಷ್ಟವಿರುವಂತೆ ಕಾಣಲಿಲ್ಲ. ಆದುದರಿಂದ ಭಲ್ಲಾಣ ರಾಜ್ಯದಲ್ಲಿ ದೊಡ್ಡದೊಂದು ಮಾರ್ಪಾಡು ಉಂಟಾಯಿತು. ಅದೇನೆಂದರೆ, ಈಗ ನಡೆದ ಯುದ್ಧವು ಕೇವಲ ಅಧರ್ಮ ಯುದ್ಧವೆಂದು ಎಲ್ಲರಿಗೂ ತಿಳಿಯಿತು. ಪ್ರಮೋದನೂ, ಭಾನುತೇಜನ ಪತ್ನಿಯೂ ಸೆರೆಯಲ್ಲಿರುವುದು, ಎಲ್ಲಿಂದಲೋ ಬಂದ ಮಂದಪಾಲನು ಸಿಂಹಾಸನವೇರುವುದು ಇದೆಲ್ಲಾ ಏನು? ನಿರಪರಾಧಿಯಾದ ಭಾನುತೇಜನೂ ಅವನನ್ನು ನೋಡಿಕೊಳ್ಳುತ್ತಿದ್ದ ಕಿರಾತರಾಜನೂ ಸತ್ತುದು, ಪಾಪ, ಸಣ್ಣ ಹುಡುಗ ಚಿತ್ರಭಾನು ಕಾಣದೇ ಹೋದುದು, ಇವೆಲ್ಲಾ ಪ್ರಜೆಗಳಿಗೆ ಸಹಿಸಲಾರದ ವಿಷಯಗಳಾದುವು.

"ನಮ್ಮ ರಾಜನನ್ನು ಬಿಡಿರಿ ಹೊರಗೆ! ನಮ್ಮ ಪಟ್ಟದ ಮಹಿಷಿಯನ್ನು ಹೊರಗೆ ಬಿಡಿರಿ!! ಪ್ರಮೋದ ಮಹಾರಾಜರೇ ನಮಗೆ ಪ್ರಭುವಾಗಿರಬೇಕು!!!" ಎಂದು ಪ್ರಜೆಗಳೆಲ್ಲಾ ಗೊಂದಲ ಮಾಡಿದರು.

ಮಂದಪಾಲನು ಏನೂ ಮಾತಾಡಲಾರದೆ ಹೋದನು. ರಾಜಗುರುವೇ ಸಮಾಧಾನಪಡಿಸಲೆತ್ನಿಸಿದನು. ಪ್ರಜೆಗಳ ಉದ್ದೇಶಕ್ಕೆ





ಅನುಕೂಲವಾಗಿ ಡಂಗುರವನ್ನು ಕೂಡಾ ಹೊಡೆಸಿದನು. ಆದರೆ ಅವೆಲ್ಲಾ ಯಾರ ಕಿವಿಗೂ ಏರಲಿಲ್ಲ. ಅನಂತರ ರಾಜಗುರು ಉಗ್ರನಾಗಿ ಪ್ರಜೆಗಳನ್ನು ಹಿಂಸೆಪಡಿಸಲು ಆರಂಭಿಸಿದನು. ಏನೂ ಪ್ರಯೋಜನ ಉಂಟಾಗಲಿಲ್ಲ..

ಇನ್ನು ಹಿಂಸಾ ಮಾರ್ಗದಿಂದ ಪ್ರಜೆಗಳನ್ನು ಶಾಂತಿಗೊಳಿಸಲಾಗದೆಂದು ರಾಜಗುರುವಿಗೆ ಗೊತ್ತಾಗಿಹೋಯಿತು. ತುಂಬಾ ಹೊತ್ತು ಆಲೋಚನೆ ಮಾಡಿ ಕಡೆಗೆ, 'ಇನ್ನು ಏಳು ವರ್ಷದವರೆಗೆ ನೀವಾರೂ ಶೀರ್ವೆ ಕೊಡಬೇಕಾಗಿಲ್ಲ' ಎಂದು ಸಾರಿಸಿಬಿಟ್ಟರೆ, ಖಂಡಿತವಾಗಿಯೂ ಜನರು ದಾರಿಗೆ ಬರುವರೆಂದು ನಿಶ್ಚಯಿಸಿಕೊಂಡುಬಿಟ್ಟನು. ಆದರೆ ಆ ಏಳುವರ್ಷ ರಾಜ್ಯವನ್ನು ಪರಿಪಾಲನೆ ಮಾಡುವುದು ಹೇಗೆ?—ಎಂಬ ಯೋಚನೆ ಬೆಟ್ಟದಂತೆ ಅಡ್ಡ ಬಂತು. ಭಲ್ಲಾಣ ರಾಜ್ಯದ ಖಜಾನೆ ಯುದ್ಧದಿಂದ ಖಾಲಿಯಾಗಿ ಹೋಗಿತ್ತು. ಇನ್ನೇನು ಮಾಡುವುದು? ಎಲ್ಲಾ ಯೋಚನೆಮಾಡಿ, ಕಡಗೆ ರಾಜಗುರು ಸಾಮಂತ ರಾಜರುಗಳಿಗೆ ಈ ಪ್ರಕಾರವಾಗಿ ಒಂದು ತಾಖೀದನ್ನು ಬರೆದು ಕಳಿಸಿದನು:—

"ನೀವುಗಳೆಲ್ಲಾ ನಿಷ್ಕಾರಣವಾಗಿ ಯುದ್ಧಕ್ಕೆ ಕಾರಣರಾದುದರಿಂದ, ಪ್ರಜೆಗಳೆಲ್ಲಾ ತುಂಬಾ ಬಾಧೆಪಟ್ಟಿದ್ದಾರೆ. ಅವರ ಕಷ್ಟನಷ್ಟಗಳಿಗೆ ಪರಿಹಾರಕೊಡಬೇಕಾದುದೀಗ ನಮ್ಮ ಹಾಗು ನಿಮ್ಮ ಕರ್ತವ್ಯವಾಗಿದೆ. ಏಳು ವರ್ಷಗಳ




ವರೆಗೂ ಪ್ರಜೆಗಳಿಂದ ಏನೂ ಶೀರ್ವೆ ವಸೂಲು ಮಾಡಬಾರದೆಂದೂ, ರಾಜ್ಯವು ಮಾಮೂಲು ಸ್ಥಿತಿಗೆ ಬರುವವರೆಗೂ ಪ್ರಜೆಗಳಿಗೆ ಬೇಕಾದ ಸದುಪಾಯಗಳನ್ನೆಲ್ಲ ಮಾಡಿಕೊಡಬೇಕೆಂದೂ ನಾವು ನಿಶ್ಚಯಿಸಿಕೊಂಡಿದ್ದೇವೆ. ಈ ಕಾರ್ಯವು ಕೊನೆಗಾಣಲಿಕ್ಕೆ ನೀವುಗಳೂ ಸಹಾಯಪಡಬೇಕು. ಈಗ ಜರೂರಾಗಿ ಈ ಸಮಯದಲ್ಲಿ ನೀವು ನಮ್ಮ ಖಜಾನೆಗೆ ಸೇರಿಸಬೇಕಾದ ಕಪ್ಪವನ್ನು ಇಮ್ಮಡಿಯಾಗಿ ಮಾಡಿ ಕೂಡಲೇ ಕಳಿಸಿಕೊಡಬೇಕು. ಇದೇ ನೀವು ಮಾಡುವ ಮೊದಲನೇ ಸಹಾಯ...."

ಈ ತಾಖೀದನ್ನು ನೋಡುತ್ತಲೇ ಸಾಮಂತರೆಲ್ಲಾ ಘೂರ್ಜರರಾಜನ ಕೈಕೆಳಗೆ ಸಮಾವೇಶಗೊಂಡರು. ಇದ್ದ ನಮ್ಮ ರಾಜನನ್ನು ಹೋಗಲಾಡಿಸಿಕೊಂಡು, ಇಲ್ಲದ ಸಲ್ಲದ ರಾಜ






ನನ್ನು ತಂದುಕೊಂಡೆವಲ್ಲಾ ಎಂದು ಅವರೆಲ್ಲಾ ತುಂಬಾ ವಿಚಾರಪಟ್ಟರು. ಎಷ್ಟೋ ಚರ್ಚಿಸಿಕೊಂಡರೂ ಒಂದು ನಿಶ್ಚಯಕ್ಕೆ ಬರಲಿಲ್ಲ ಕಡೆಗೆ ಅವರು ಅಮರಭೂಪತಿಯನ್ನೇ ಕರೆತು ಆಲೋಚನೆ ನಡೆಸಿದರು. ಅನುಭವಶಾಲಿಯಾದ ಅಮರಭೂಪತಿ, ಒಳ್ಳೇದು ಕೆಟ್ಟದುಗಳನ್ನು ಚೆನ್ನಾಗಿ ಯೋಚಿಸಿಕೊಂಡು ಹೀಗೆಂದನು:

"ಈಗ ನಾವೆಲ್ಲಾ ಸಹನೆಯನ್ನು ಚೆನ್ನಾಗಿ ಅವಲಂಬಿಸಿಕೊಳ್ಳಬೇಕಾಗಿದೆ. ನಾವು ಕೊಂಚ ಉದ್ರೇಕಪಟ್ಟರೂ, ದುಡುಕಿ ಏನೇ ಮಾಡಿದರೂ ಆ ರಾಜಗುರುವಿನ ಕೈಯೊಳಗಿರುವ ಪ್ರಮೋದನಿಗೂ, ಅವನ ಸೊಸೆಗೂ ಅಪಾಯವಾದೀತು. ರಾಜಗುರು ಬಹಳ ಕ್ರೂರ. ಏನು ಮಾಡಲಿಕ್ಕೂ ಹಿಂಜರಿಯುವವನಲ್ಲ. ಆದುದರಿಂದ ಈ ಪರಿಸ್ಥಿತಿಯಲ್ಲಿ ನಾವು, ಅವನು ಕೊಡುವ ಹಿಂಸೆಗಳನ್ನೆಲ್ಲಾ ಸಹಿಸಿಕೊಂಡೇ ಇರಬೇಕಾಗಿದೆ. ನಾವೀಗ ಮಗು ಚಿತ್ರಭಾನುವನ್ನು ಹೇಗಾದರೂ ಹುಡುಕಿ ಹಿಡಿದು ಕಾಪಾಡಬೇಕಾದುದು ಮುಖ್ಯವಾಗಿದೆ...." ಎಂದು ಸಲಹೆಕೊಟ್ಟನು.

ಸಾಮಂತರಿಗೆಲ್ಲಾ ಈ ಮಾತು ಬಹಳ ಹಿಡಿಸಿತು. ಆ ಹುಡುಗನನ್ನು ಹುಡುಕಲಿಕ್ಕಾಗಿ ಕೆಲವರು ಚಾರರನ್ನು ನಾಲ್ಕು ದಿಕ್ಕುಗಳಿಗೂ ಕಳಿಸಿದರು.

ಅನಂತರ ಸಾಮಂತರಾಜರೆಲ್ಲರೂ ಕೂಡಿ ರಾಜಗುರುವಿಗೆ ಹೀಗೆ ಉತ್ತರ ಒರೆದು ಕಳುಹಿಸಿದರು:—"ನಿಮ್ಮ ಭೋಧನೆಗಳನ್ನೆಲ್ಲಾ ನಾವು ಅಕ್ಷರಶಃ ಶಿರಸಾವಹಿಸುತ್ತೇವೆ. ಯುದ್ಧದ ಬಗ್ಗೆ ನಮಗೂ ತುಂಬಾ ಖರ್ಚಾಗಿದೆ. ರತ್ನಕಿರೀಟವಿಲ್ಲದ ರಾಜನಿಗೆ ಕಪ್ಪಕಟ್ಟಬಾರದೆಂದು ನೀವೇ ಹೇಳಿದ್ದರಿಂದ ನಿಜವೆಂದುಕೊಂಡು ನಾವು ಆಗ ಹಾಗೆ ಬರೆದೆವು. ಅದರ ಪ್ರತಿಕ್ರಿಯೆಯಾಗಿ ಬಂದ ಯುದ್ಧದಲ್ಲಿ ಪಾಲುಗೊಂಡು, ಎಷ್ಟೋ ಕಷ್ಟನಷ್ಟಗಳಿಗೆ ಒಳಗಾದೆವು. ಈಗ ಈ ರೀತಿಯಾಗಿ ನಿಮ್ಮ ಮನಸ್ಸು ತಿರುಗಿಹೋದೀತೆಂದು ನಾವು ಭಾವಿಸಲಿಲ್ಲ. ಯುದ್ಧರಂಗದಿಂದ ಮನೆಗೆ ಮುಟ್ಟುವ ಮೊದಲೇ ಕಪ್ಪಕಟ್ಟಬೇಕೆಂದು ನೀವು ಶಾಸನ ಮಾಡುವಿರೆಂದು, ನಾವು ಸ್ವಪ್ನದಲ್ಲಿಯೂ ನೆನೆಸಿರಲಿಲ್ಲ. ಅದನ್ನೀಗ ಇಮ್ಮಡಿಸಿಕೊಳ್ಳಬೇಕೆನ್ನುವಿರಿ. ಭಲ್ಲಾಣ ರಾಜ್ಯವು ನಿಮ್ಮ ಕೈಗೆ



ಸಿಕ್ಕುತ್ತಲೇ ನೀವು ವಾಗ್ದಾನ ಮಾಡಿದಂತೆ ನಮಗೇನೋ ಸ್ವರ್ಗ ಸುಖ ಸಿಕ್ಕುವುದೆಂದು ಆಶೆಪಟ್ಟೆವು. ಅದೀಗ ನಂಕವಾಗಿ ಮಾರ್ಪಟ್ಟಂತಾಯಿತು. ನಮ್ಮ ಕಷ್ಟಗಳನ್ನು ನಿಮ್ಮೊಡನೆ ಮೊರೆಯಿಟ್ಟುಕೊಳ್ಳೋಣವೆಂದರೆ, ಈಗ ನೀವು ಅದನ್ನು ಕೇಳುವ ಪರಿಸ್ಥಿತಿಯಲ್ಲಿಯೇ ಇಲ್ಲದ್ದರಿಂದ, ನಾವು ಇಷ್ಟಕ್ಕೇ ವಿರಮಿಸಿಕೊಳ್ಳುತ್ತೇವೆ."

ಸಾಮಂತರಿಂದ ಬಂದ ಈ ಬಗೆಯ ಪ್ರತ್ಯುತ್ತರವನ್ನು ನೋಡಿ ರಾಜಗುರುವಿಗೆ ಏನು ಮಾಡಲಿಕ್ಕೂ ಸಾಧ್ಯವಿಲ್ಲದೆ ಹೋಯಿತು. "ನನ್ನ ಮಂತ್ರವೇ ನನಗೆ ತಿರುಗಿ ಬಡೆಯಿತಲ್ಲ! ನಾನು ಹೇಳಿದ ಉಪಾಯಗಳೇ ನನಗೆ ಭಸ್ಮಾಸುರ ವರದಂತಾಯಿತಲ್ಲಾ!" ಎಂದು ಚಡಪಡಿಸುತ್ತ ತೀವ್ರವಾದ ಚಿಂತೆಯುಲ್ಲಿ ಬಿದ್ದನು.

ಅತ್ತ ಪ್ರಜೆಗಳ ಘೋಷಣೆ! ಇತ್ತ ಸಾಮಂತರ ದೂಷಣೆ!! ಖಂಡಿತವಾಗಿ ಏನಾದರೂ ಹಿತ್ತಾಯ ಪಡಿಸಿದರೆ, ಅವರೆಲ್ಲಿ ಯುದ್ಧಕ್ಕೆ ಬರುವರೋ ಎಂಬ ಭಯದಿಂದ ಬಾಯಿಮುಚ್ಚಿ ಕುಳಿತುಕೊಳ್ಳಬೇಕಾಯಿತು. ಏನಾದರೂ ಹೇಳಿ ನಂಬಿಸೋಣವೆಂದರೆ ಮುದುಕ ರಾಜನನ್ನೂ, ಭಾನುತೇಜನ ಪತ್ನಿಯನ್ನೂ ಬಿಟ್ಟುಕೊಟ್ಟ ಹೊರತು, ಪ್ರಜೆಗಳು ಸುಮ್ಮನಿರುವಂತಿಲ್ಲ. ಬಿಟ್ಟುಕೊಟ್ಟರೆ ಕಥೆಯೇ ಅಡ್ಡ ತಿರುಗಿಬಿಟ್ಟೀತು. ಇದರಲ್ಲಿ ಮೊದಲು ಯಾವದಾದರೊಂದು ಅನಾಂತರವನ್ನು ದಾಟದೆ ಉಪಾಯವೇ ಇರಲಿಲ್ಲ....ಹೀಗೇ



ಯೋಚನೆ ಮಾಡುವಾಗ, ಅವನಿಗೆ ಮಿಂಚಿನಂತೆ ಒಂದು ಹೊಸ ಯೋಚನೆ ಹೊಳೆಯಿತು. ಆದರೆ ಅದರೊಂದಿಗೆ ಮುಂಡಪಾಲನು ಏಕೀಭವಿಸುವನೆಂಬ ನಂಬಿಕೆ ಕಾಣಲಿಲ್ಲ.

ರಾಜಗುರು ತನ್ನ ಮಗನನ್ನು ಕರೆದು ತನ್ನ ಹೊಸ ವ್ಯೂಹವನ್ನ ಕುರಿತು ಹೇಳಿದನು. ಅವನು ಕೂಡಲೇ ಅನುಮೋದಿಸಿದನು. ಅಷ್ಟೇ ಅಲ್ಲ, ಈ ವ್ಯೂಹವು ನೆರವೇರಿದರೆ, ತನಗೆ ಬಹುಕಾಲದಿಂದಿದ್ದ ಕೋರಿಕೆ, ಭಲ್ಲಾಣರಾಜ್ಯವನ್ನು ಆಕ್ರಮಿಸಬೇಕೆಂಬ ತನ್ನ ಆಶೆ ಖಂಡಿತ ನೆರವೇರುವುದೆಂದೂ ಸಂತೋಷಪಟ್ಟನು.

ಮಗನ ಈ ಅಭಿಲಾಷೆಯನ್ನು ಕೇಳುತ್ತಲೇ ರಾಜಗುರುವಿನ ಮನಸ್ಸು ವಿಚಿತ್ರವಾಗಿ ಮಾರ್ಪಟ್ಟಿತು. ಆಗ ಹುಡುಕಲಿಕ್ಕೆ ಹೋಗಿದ್ದ ಸೇವಕರು ಬಂದು ಚಿತ್ರಭಾನು ಸತ್ತೇಹೋಗಿ





ರುವನೆಂದು ಕೂಡಾ ಹೇಳಿದ್ದು ಕೇಳಿ ಅವನಿಗೆ ಇನ್ನಷ್ಟು ಸಮಾಧಾನವಾಯಿತು. ಈಗ ಅವನಿಗೆ ಮಂದಪಾಲನನ್ನು ಆಚೆಗೆ ತಳ್ಳಿಹಾಕಿ, ತನ್ನ ಮಗನನ್ನೆ ಗದ್ದುಗೆಗೇರಿಸಬೇಕೆಂಬ ಆಶೆ ಅಂಕುರಿಸಿ ಬೇಗಬೇಗನೆ ಬೆಳೆಯಿತು. ತಂದೆ ಮಗಂದಿರು ಈ ಕುರಿತು ಗಾಢಾಲೋಚನೆ ಮಾಡಿಕೊಂಡರು.

ತಮ್ಮ ತಂತ್ರವನ್ನು ಮರುದಿನವೇ ಸಾಗಿಸಬೇಕೆಂದು ನಿಶ್ಚಯ ಮಾಡಿಕೊಂಡರು. "ನಾನು ಅಲ್ಲಿಯೇ ಇದ್ದು ಎಲ್ಲಾ ಏರ್ಪಾಡನ್ನೂ ಸ್ವಯಂ ಮಾಡಿ ಬಿಡುತ್ತೇನೆ." ಎಂದು ಕುಮಾರನು ತಂದೆಗೆ ಧೈರ್ಯ ಹೇಳಿದನು. ಮಗನ ಧೈರ್ಯಕ್ಕೆ ತಂದೆ ಮೆಚ್ಚಿದ. ಇನ್ನೇನು? ಆಹಾ! ತನ್ನ ಮುದ್ದು ಮಗನು ಭಲ್ಲಾಣ ರಾಜನಾಗುವ



ವೈಭವವನ್ನು ನೋಡುವಂತಾಯಿತೆಂದು ರಾಜಗುರು ಉಬ್ಬಿತ್ತಿದ್ದನು.

ತಂದೆ ಮಕ್ಕಳು ಅಂದುಕೊಂಡ ಪ್ರಕಾರವೇ ಒಂದುದಿನ ರಾಜಗುರುವಿನ ಮಗನು ಗುಟ್ಟಾಗಿ ಕೆಲವು ಆಳುಗಳನ್ನು ಕರೆದನು. ಅದ್ಭುತವಾದ ಸಾಧನೆಗಳನ್ನು ಹೇಳಿಕೊಟ್ಟನು. ಮತ್ತೇನಲ್ಲ, ಕಾರಾಗಾರಕ್ಕೆ ಬೆಂಕಿ ಹಚ್ಚುವಂತೆ ಹೇಳಿದನು. ಯಾವಯಾವ ಭಾಗಗಳು ಮೊದಲು ಹೊತ್ತಿಕೊಳ್ಳಬೇಕೋ ಅದನ್ನು ಅರ್ಥವಾಗುವಂತೆ ವಿವರಿಸಿದನು. ಇದೊಂದೂ ಬೇರೆಯಾರಿಗೂ ಗೊತ್ತಾಗದಂತೆ ಬಹು ಜಾಗ್ರತೆ ವಹಿಸಿದನು.

ಅಂದುಕೊಂಡಂತೆ ತುಸು ಮುಂಚಿತವಾಗಿಯೇ ಕಾರಾಗಾರಕ್ಕೆ ಬೆಂಕಿ ಹಿಡಿಯಿತು. ನೋಡಿ ನೋಡುವುದರೊಳಗೆ ಬೆಂಕಿ ಆಕಾಶಕ್ಕೆ ಚಾಚಿಕೊಂಡು ವ್ಯಾಪಿಸಿತು. ರಾಜಗುರುವಿನ ಮಗನಿಗೆ ಯಾಕೋ ಏನೋ ಫಕ್ಕನೆ ಒಂದು ಸಂದೇಹ ಬಂತು. ಪ್ರಮೋದನ ಕೋಣೆಗೆ ಬೆಂಕಿ ಹಿಡಿದಿದೆಯೋ ಇಲ್ಲವೊ! ಭಾನುತೇಜನ ಹೆಂಡತಿಯ ಕೋಣೆ ಬೆಂಕಿಗೆ ಆಹುತಿ ಆಯಿತೋ ಇಲ್ಲವೊ? ಒಂದು ವೇಳೆ ಅವರು ತಪ್ಪಿಸಿಕೊಂಡರೇನೋ! ಅವರು ಸಾಯುವುದನ್ನು ಕಣ್ಣಾರೆ ಕಂಡೇ ನಿರ್ಧರಿಸಿಕೊಳ್ಳಬೇಕು, ಎಂದು ಅವನಿಗೆ ತೋರಿತು. ಕೂಡಲೇ ಅವನು ಆ ಎರಡು ಕೋಣೆಗಳ ಕಡೆಗೆ ಗಬಗಬನೆ ಓಡಿದನು. ಆಗ ಜ್ವಾಲಾಮಾಲೆಯಾಗಿ ಉರಿಯುತ್ತಿದ್ದ ಮೇಲಿನ ದೊಡ್ಡ ತೊಲೆಯೊಂದು ಅವನ ಮೇಲೆ ಬಿತ್ತು!....





ಬ್ರಹ್ಮಾಂಡವಾದ ಬೆಂಕಿಯನ್ನು ಕಂಡು ನಗರವೆಲ್ಲಾ ಅಲ್ಲಕಲ್ಲೋಲವಾಯಿತು. ಪ್ರಜೆಗಳೆಲ್ಲಾ ಓಡೋಡಿ ಬರುತ್ತಿದ್ದರು. ಪ್ರಜೆಗಳ ಅಳುವ ದನಿ ಕಲ್ಲೂ ಕರಗುವಂತಾಯಿತು.

ಯಾರ ಅಳುವನ್ನೂ ದುಃಖವನ್ನೂ ಅಗ್ನಿದೇವನೇನೂ ಲಕ್ಷ್ಯಮಾಡಿಲ್ಲ. ತನ್ನ ಸ್ವಾಹಾ ಕಾರ್ಯವನ್ನು ಭರದಿಂದ ಸಾಗಿಸುತ್ತಿದ್ದನು. ದೊಡ್ಡ ದೊಡ್ಡ ಜ್ವಾಲೆಗಳು ಆಕಾಶಕ್ಕೆ ಚಾಚಿಕೊಂಡು, ರಾತ್ರಿ ಹಗಲಾಗಿ ಕಾಣುತ್ತಿತ್ತು.

ಹಲವರು ಸಾಹಸ ಪಟುಗಳು ನೀರು ಹಾಕಿ ಹಾಕಿ ಬೆಂಕಿಯನ್ನು ನಂದಿಸಲು ನೋಡಿದರು. ಕೆಲವರು ಮಳಲನ್ನು ಬಾಚಿ ಬಾಚಿ ಸುರಿದರು. ಧೈರ್ಯಶಾಲಿಗಳು ಕೆಲವರು ಒಳಕ್ಕೆ ತೂರಿ ಕಾರಾಗೃಹದ ಬಾಗಿಲನ್ನು ಒಡೆದು, ಒಳಗಿದ್ದವರನ್ನು ಹೊರಗೆ ಎಳೆದು ಹಾಕಿದರು.

ಇಷ್ಟರಲ್ಲಿ ಈ ವಾರ್ತೆ ಕೋಟೆಯೊಳಕ್ಕೆ ಹೊಕ್ಕು ಮಂಡಪಾಲನಿಗೆ ತಿಳಿಯಿತು. ಚಡಪಡಿಸಿದನು. "ಇದೇನು ಘೋರ! ಯಾರು ಮಾಡಿದ ಕೆಲಸ? ಈ ಪ್ರಮಾದದಲ್ಲಿ ಭಾನುತೇಜನ ಪತ್ನಿಯೇ ತೀರಿಹೋದರೆ ನಾನೇ ಈ ಕೆಲಸ ಮಾಡಿಸಿದೆನೆಂದು ಪ್ರಜೆಗಳು ನನ್ನ ಮೇಲೆ ಎದುರುಬಿದ್ದರೆ ಏನು ಮಾಡಲಿ? ಈಗಿನ ಪರಿಸ್ಥಿತಿಯಲ್ಲಿ ನನ್ನ ತಲೆಯಮೇಲೆ ಇಂತಹ ಅಪವಾದವು ಬಿದ್ದರೂ ಆಶ್ಚರ್ಯವೇನಿಲ್ಲ...." ಹೀಗೆಲ್ಲಾ ಯೋಚಿಸಿಕೊಂಡು, ಮಂದಪಾಲನು ಕಾರಾಗಾರದ ಕಡೆಗೆ ಓಡಿದನು. ಎಷ್ಟು ಮಂದಿ ಬೇಡೆಂದರೂ ಕೇಳದೆ ಸಾಹಸಮಾಡಿ ಒಳಕ್ಕೆ ಹೊಕ್ಕನು. ಪ್ರಮೋದನನ್ನು ಬಂಧಿಸಿದ ಕೋಣೆಯ ಬಾಗಿಲನ್ನು ಭೇದಿಸಿ, ಒಳಹೊಕ್ಕು, ಪ್ರಮೋದನನ್ನು ಭುಜದಲ್ಲೇರಿಸಿಕೊಂಡು ಹೊರಗೆ ಬಂದನು. ಪುನಃ ಹೋಗಿ ಭಾನುತೇಜನ ಪತ್ನಿಯ ಕೋಣೆಯನ್ನು ಒಡೆದು ಒಳಹೊಕ್ಕು ನೋಡಿದನು. ಅವಳು ಸತ್ತು ಮಸಿಯಾಗಿ ಹೋಗಿದ್ದಾಳೆ! ಇದನ್ನು ಕೇಳಿ ಎಲ್ಲರೂ ಗೊಳೋ ಎಂದು ಅತ್ತರು!

ಪಾಪ! ಕೋಣೆಯೊಳಗೆ ಸಿಕ್ಕಿಬಿದ್ದ ಅವಳಿಗೆ ತಪ್ಪಿಸಿಕೊಳ್ಳಲಿಕ್ಕೆ ಸಾಧ್ಯವಾಗಲೇ ಇಲ್ಲ.

ಏನು ಘೋರ! ಎಂಥ ಬೀಭತ್ಸ! ಇನ್ನೂ ಎಷ್ಟೋ ಕೋಣೆಗಳಲ್ಲಿ ಅನೇಕರು ಸತ್ತು ಮಸಿಯಾಗಿದ್ದಾರೆ!!!

ಆಗ ರಾಜಗುರು ಅಲ್ಲಿಗೆ ಬಂದ. ಬುದ್ಧಿ ಕೆಟ್ಟವನ ಹಾಗೆ ಕಾರಾಗೃಹವನ್ನೆಲ್ಲಾ ಸುತ್ತಾ

ಡಿದ. ಸುಟ್ಟ ತೊಲೆಯ ಕೆಳಗೆ ತನ್ನ ಮಗನು ಸತ್ತುಬಿದ್ದಿರುವುದನ್ನು ನೋಡಿ, ಸ್ಮೃತಿ ತಪ್ಪಿ ಅಲ್ಲಿಯೇ ಬಿದ್ದುಬಿಟ್ಟ!!

ತಾಯಿಯನ್ನು ಅಗಲಿ ಹೋದ ಚಿತ್ರಭಾನು "ನೀರು ನೀರು" ಎನ್ನುತ್ತಾ ಓಡುತ್ತಿದ್ದನು. ಆಗ ಅವನಿಗೆ ಒಬ್ಬ ಮಹರ್ಷಿಯ ದರ್ಶನವಾಯಿತು. ಅವನು ಬೇರೆ ಯಾರೂ ಅಲ್ಲ; ಮೊತ್ತಮೊದಲು ಪ್ರಮೋದ ರಾಜನಿಗೆ ಹಣ್ಣನ್ನು ಮಂತ್ರಿಸಿಕೊಟ್ಟ, ಸಿದ್ಧ ಪುರುಷನೇ ಅವನು! ಮಿತ್ರಾನಂದ ಮಹರ್ಷಿ!

ಆತನು ಒಂದು ಮಹಾ ಯಾಗಕ್ಕೆ ಪ್ರಾರಂಭಿಸಿದ್ದನು. ಸಂಕಲ್ಪಸಿದ್ಧಿಗಾಗಿ ಶಿಷ್ಯವೃಂದದೊಂದಿಗೆ ಭಲ್ಲಾಣ ರಾಜ್ಯದ ಸಮೀಪದ ಅಡವಿಯಲ್ಲಿ ಪ್ರಸ್ತುತ ತಂಗಿದ್ದನು.

ಯಾಗಕ್ಕೆ ಬೇಕಾದ ಸಾಮಗ್ರಿಗಾಗಿ ಅವನು ನಡೆಯುತ್ತಿದ್ದಾಗ ಚಿತ್ರಭಾನುವನ್ನು ಕಂಡನು. ಒಡನೆಯೇ ಅವನು ಆ ತಬ್ಬಲಿ ಬಾಲನನ್ನು ಕುರಿತು, ತನ್ನ ದಿವ್ಯದೃಷ್ಟಿಯಿಂದ ನೋಡಿ, ಅವನ ಎಲ್ಲಾ ವಿಚಾರವನ್ನೂ ಅರಿತುಕೊಂಡನು. "ಮಗೂ, ನಿನ್ನ ಈ ಕೊಳೆಯಂಗಿಯನ್ನು ಬಿಚ್ಚಿ ಆಚೆಗೆ ಬಿಸುಡು" ಎಂದನು ಋಷಿ. ಬಳಿಕ ಅವನನ್ನು ಲಾಲಿಸುತ್ತಾ ತನ್ನ ಆಶ್ರಮಕ್ಕೆ ಕರೆದೊಯ್ದನು.

ಚಿತ್ರಭಾನು, ಅಲ್ಲಿಯೇ ಬೆಳೆಯುತ್ತಿದ್ದನು. ಗುರು ಅವನಿಗೆ ಸಕಲ ವಿದ್ಯೆಗಳನ್ನೂ ಕಲಿಸಲಾರಂಭಿಸಿದನು. ಹುಡುಗನೂ ಚುರುಕು ಬುದ್ಧಿಯವನಾದುದರಿಂದ, ವೇಗವಾಗಿ ಕಲಿಯುತ್ತ, ಗುರುವಿಗೆ ಪ್ರಿಯಶಿಷ್ಯನಾದನು. ಮಿತ್ರಾನಂದನು ಅವನನ್ನು ಬಹಳ ಅಭಿಮಾನದಿಂದ ನೋಡುತ್ತಾ, ಕ್ಷತ್ರಿಯೋಚಿತವಾದ ಬಿಲ್ಲುವಿದ್ಯೆ, ಕುದುರೆ ಸವಾರಿ, ಖಡ್ಗವಿದ್ಯೆ— ಮೊದಲಾದುವನ್ನೂ ಕಲಿಸಿ ಅವನನ್ನು ಒಳ್ಳೇ ಪ್ರವೀಣನನ್ನಾಗಿ ಮಾಡಿದನು.

ಹೀಗೆ ಚಿತ್ರಭಾನು ಹತ್ತು ಸಂವತ್ಸರಗಳವರೆಗೂ ಮಿತ್ರಾನಂದ ಮಹರ್ಷಿಯೊಂದಿಗೆ ಇದ್ದನು. ಅವನೊಬ್ಬ ಉತ್ತಮ ವೀರ ಪುರುಷನಾಗಿ ಮಾರ್ಪಟ್ಟು ಕಂಗೊಳಿಸಿದನು. ಇಲ್ಲಿಯವರೆಗೂ ಇವನ ವಿಷಯ ಚೆನ್ನಾಗಿಯೇ ನಡೆಯಿತು. ಆದರೆ, ಪಾಪ- ಅವನ ವಿಷಯದಲ್ಲಿ ಒಂದು ಗಟ್ಟಿಯಾದ ಸಿಕ್ಕು ತಟಸ್ಥವಾಯಿತು. ಅವನ ವಿದ್ಯಾಭ್ಯಾಸವೆಲ್ಲಾ ಪೂರ್ಣವಾಯಿತು, ನಿಜ, ಆದರೆ.... [ಇನ್ನೂ ಇದೆ]






ಹಿಂದೆ ಹುರುಳೀಹಳ್ಳ ಎಂಬ ಗ್ರಾಮದಲ್ಲಿ ಗಯ್ಯಾಳಿ ಗೋದಾವರಿ ಎಂಬ ಒಬ್ಬಳು ಹೆಂಗುಸಿದ್ದಳು. ಅವಳು ದೊಡ್ಡ ಜಗಳಗಂಟಿ. ಕಾರಣವಿಲ್ಲದೆಯೇ ಅವಳು ಗ್ರಾಮದಲ್ಲಿರುವ ಪ್ರತಿಯೊಬ್ಬರೊಡನೆಯೂ ಜಗಳಮಾಡುತ್ತಿದ್ದಳು. ಅಂತೆಯೇ ಅವಳಿಗೆ 'ಗಯ್ಯಾಳಿ' ಎಂಬ ಬಿರುದು ಬಂದಿತ್ತು. ಈ ದೊಡ್ಡ ಗಯ್ಯಾಳಿಯನ್ನು ಊರಿನಿಂದ ಹೊರಡಿಸುವುದು ಹೇಗೆಂದೇ ಎಲ್ಲರಿಗೂ ಯೋಚನೆ.

ಅವಳ ಕಾಟ ತಾಳಲಾರದೆ ಗ್ರಾಮದ ಹಿರಿಯರೆಲ್ಲಾ ಒಂದು ಸಭೆಸೇರಿ ಒಂದು ನಿಶ್ಚಯಕ್ಕೆ ಬಂದರು. ಅವಳನ್ನು ಊರಿನಿಂದ ಹೊರಗೆ ಓಡಿಸಬೇಕಾದರೆ, ಅವಳು ಕಲಿತ ವಿದ್ಯೆಯಲ್ಲಿ ಅವಳನ್ನು ಮಿಂಚಿದವರೇ ಆಗಬೇಕು. ಆದುದರಿಂದ ಸ್ವಲ್ಪ ಹಣ ಜಮೆ ಮಾಡಿ 'ಗಯ್ಯಾಳಿ ಗೋದಾವರಿಯನ್ನು ಜಗಳಾಟದಲ್ಲಿ ಸೋಲಿಸಿ ಓಡಿಸಿದವರಿಗೆ ಬಹುಮಾನ ಕೊಡಲಾಗುವುದು' ಎಂದು ಡಂಗುರ ಹಾಕಿಸಿದರು.

ಹುರುಳೀಹಳ್ಳದವರೇ ಅಲ್ಲದೆ, ಸುತ್ತುಮುತ್ತಿನ ಗ್ರಾಮದವರುಕೂಡ ಆ ಡಂಗುರವನ್ನು ಕೇಳಿದರು. ಬಹಳಮಂದಿಗೆ ಬಹುಮಾನದ ಮೇಲೆ ಆಶೆಯಾಯಿತು. ಆದರೆ ಒಬ್ಬರಿಗೂ ಆ ಗಯ್ಯಾಳಿಯೊಡನೆ ಕಯ್ಯಿಕ್ಕಿನಿಂತು ಗೆದ್ದೇವೆಂಬ ಧೈರ್ಯವಿಲ್ಲ.

ಆ ಗ್ರಾಮದಲ್ಲಿ ಬಾಲಯ್ಯನೆಂಬ ಬಡವನೊಬ್ಬನಿದ್ದ. ಅವನಿಗೆ ಒಬ್ಬ ಮಗನೂ ಸೊಸೆಯೂ ಇದ್ದರು. ಸೊಸೆಯ ಹೆಸರು ಗೌರಿ. ಅವಳು ವಯಸ್ಸಿನಲ್ಲಿ ಸಣ್ಣವಳಾದರೂ ಚುರುಕುಬುದ್ಧಿಯವಳು. ಗೋದಾವರಿಯನ್ನು ಕುರಿತು ಡಂಗುರವನ್ನು ಕೇಳಿ, ತಾನು ಹೋರಾಟಕ್ಕೆ ನಿಂತು ಅವಳನ್ನು ಓಡಿಸುವೆನೆಂದು ಬಾಲಯ್ಯನೊಡನೆ ಹೇಳಿದಳು.

ಹುಡುಗಿಯ ಮಾತನ್ನು ಕೇಳಿ ಬಾಲಯ್ಯ ತಮಾಷೆಯಾಗಿ ನಕ್ಕನು. "ಗೋದಾವರಿಯು ಗಯ್ಯಾಳಿ ತನಕ್ಕೆ ಗ್ರಾಮದಲ್ಲಿರುವ ದೊಡ್ಡ ದೊಡ್ಡವರೆಲ್ಲಾ ಹೆದರವಾಗ, ಚಿಕ್ಕವಳಾದ ನಿನ್ನಿಂದೇನಾದೀತೆ? ಸುಮ್ಮನಿರು" ಎಂದನು.

ಶಾರದಾ ರಾಮಯ್ಯ, ನಂಜನಗೂಡು




ಆದರೆ ಗೌರಿ ಹಟಹಿಡಿದಳು. ಅವಳನ್ನು ತಾನು ಖಂಡಿತವಾಗಿಯೂ ಓಡಿಸುವೆನೆಂದು ಧೈರ್ಯವಾಗಿ ಹೇಳಿದಳು. ಜಯವಾದರೆ ಬಹಳ ಧನವು ಸಿಕ್ಕುವಂತೆಯೂ ಇರುವುದರಿಂದ ಕಡೆಗೆ ಬಾಲಯ್ಯ ಒಪ್ಪಿದ.

ಗಯ್ಯಾಳಿ ಗೋದಾವರಿಯೊಡನೆ ಜಗಳಕ್ಕೆ ನಿಲ್ಲುವುದೆಲ್ಲಿ? ಹೇಗೆ? ಎಂಬ ಪ್ರಶ್ನೆಗಳು ಇದಿರಾದುವು. ಅದಕ್ಕೆ ಗೌರಿ ಒಂದು ಉಪಾಯಮಾಡಿದಳು. ಊರ ಬದಿಯ ನದಿಯಲ್ಲಿ, ತಾನೊಂದು ದೋಣಿಯಲ್ಲಿ ನಿಂತಿರುವೆನೆಂದೂ, ಒಂದು ಹಳೆಯ ಚೆಪ್ಪಲಿಯನ್ನೂ, ಒಂದು ಮೊಂಡು ಕಸಪರಿಕೆಯನ್ನೂ ತನಗೆ ಕೊಡಬೇಕೆಂದೂ ಕೇಳಿದಳು. ಹಾಗೇ ಎಲ್ಲಾ ಏರ್ಪಾಡಾಯಿತು.



ನದಿಯ ಮೇಲೆ ದೋಣಿಯಲ್ಲಿ ಗೌರಿ ನಿಂತಳು. ಎಡಗೈಯಲ್ಲಿ ಚೆಪ್ಪಲಿಯನ್ನೂ ಬಲಗೈಯಲ್ಲಿ ಮೊಂಡು ಕಸಪರಿಕೆಯನ್ನೂ ಹಿಡಿದಿದ್ದಳು. ತನ್ನ ಮುಖವು ಕಂಡೂ ಕಾಣದಂತೆ ಸೆರಗಿನಿಂದ ಮುಚ್ಚಿಕೊಂಡಿದ್ದಳು.

ಗಯ್ಯಾಳಿ ಗೋದಾವರಿಯೊಡನೆ ಕೆಲವರು ಈ ವಾರ್ತೆಯನ್ನು ಹೇಳಿದರು. "ಏನು! ನನ್ನೊಡನೆ ಜಗಳಕ್ಕೆ ನಿಲ್ಲುವವಳು ಈ ಲೋಕದಲ್ಲಿದ್ದಾಳೆಯೆ? ಆ! ಅಷ್ಟು ಸೊಕ್ಕೇ ಅವಳಿಗೆ!" ಎನ್ನುತ್ತಾ ಅವಳು ನದಿಯ ಬದಿಗೆ ಧುಡಧುಡನೆ ಬಂದಳು.

ಆಗ ಅಲ್ಲಿಗೆ ನೂರಾರು ಜನರು ಬಂದು ಗುಂಪುಗೂಡಿಬಿಟ್ಟಿದ್ದರು. ಕೆಲವರು ತಮಾಶೆ ನೋಡಲಿಕ್ಕೂ, ಕೆಲವರು, ಗೌರಿ ಹೇಗೆ ಜಗಳ ಮಾಡುವಳೆಂದು ಕಣ್ಣಾರೆ ಕಾಣಲಿಕ್ಕೂ, ಬಂದಿದ್ದರು.

"ಈ ಸಣ್ಣ ಹುಡುಗಿ ಈ ಗಂಡುಬೀರಿಗೆ ಹೇಗೆ ಈಡಾಗುವಳೊ" ಎಂದು ಎಲ್ಲರಿಗೂ ತೋರುತ್ತಿತ್ತು.

ಗಯ್ಯಾಳಿ ಗೋದಾವರಿ ಗೌರಿಯನ್ನು ಬಯ್ಯಲಾರಂಭಮಾಡಿದಳು. "ಯಾರೇ ನೀನು? ನನೊಡನೆ ಜಗಳಕ್ಕೆ ನಿಲ್ಲಲಿಕ್ಕೆ ಬಂದಿದ್ದಿಯಾ? ಬಾ! ನಿನ್ನ ಸೊಕ್ಕಿಳಿಸುತ್ತೇನೆ—" ಎಂದು ನಾನಾವಿಧವಾಗಿ ಬಯ್ಯತೊಡಗಿದಳು.






ಗೌರಿ ದೋಣಿಯಲ್ಲಿಯೇ ನಿಂತುಕೊಂಡು ಬಾಯಿ ತೆರೆಯದೆ, ಬಲಗೈಯಲ್ಲಿರುವ ಕಸಪರಿಕೆಯನ್ನು ಗೋದಾವರಿಯ ಕಡೆಗೆ ತೋರಿಸಿದಳು. ಆದರಿಂದ ಗೋದಾವರಿಗೆ ಮತ್ತಷ್ಟು ಕೋಪಬಂತು. ಗಂಟಲು ಹರಿದು ಹೋಗುವಹಾಗೆ ಕರ್ಕಶವಾಗಿ ಬಯ್ಯತೊಡಗಿದಳು. ಎಲ್ಲಾ ಬಯ್ಗಳಿಗೂ ಗೌರಿ, ಒಮ್ಮೆ ಕಸಪರಿಕೆಯನ್ನೂ, ಇನ್ನೊಮ್ಮೆ ಚೆಪ್ಪಲಿಯನ್ನೂ ತೋರಿಸುತ್ತಾ "ಹೊಡೀತೇನೆ" ಎಂಬಂತೆ ಆಡಿಸುತ್ತಿದ್ದಳು.

ಗಯ್ಯಾಳಿಗೆ ಮತ್ತಷ್ಟು ರೊಚ್ಚೇರಿತು. ಆವೇಶದಿಂದ ಹುಚ್ಚುಚ್ಚಾಗಿ ಬಯ್ಯತೊಡಗಿದಳು. ಗೌರಿ ಬಾಯೇ ತೆರೆಯಲಿಲ್ಲ. ಚೆಪ್ಪಲಿಯನ್ನೂ, ಕಸಪರಿಕೆಯನ್ನೂ ಕಾಣಿಸುತ್ತಾ ಉತ್ತರಕೊಟ್ಟಳು. ಅಷ್ಟೇ.

ನೋಡುತ್ತಿದ್ದ ಜನರೆಲ್ಲಾ ಹೊಟ್ಟೆ ಹುಣ್ಣಾಗುವಂತೆ ಬಿದ್ದು ಬಿದ್ದು ನಗುತ್ತಿದ್ದರು. ಬೈದು ಬೈದು ಗೋದಾವರಿಯ ಬಾಯಿ ಬಿದ್ದುಹೋಯಿತು. "ಹಾ! ದಾಹ! ದಾಹ!" ಎಂದು ಕೂಗುತ್ತಾ ನದಿಗಿಳಿದು ನೀರು ಕುಡಿದಳು. ಜನರೆಲ್ಲಾ ದೊಡ್ಡದಾಗಿ ನಕ್ಕರು.

ಇನ್ನೂ ಕೊಂಚ ಹೊತ್ತಿನಲ್ಲಿ ಅವಳ ಗಂಟಲು ಬಿದ್ದೇಹೋಯಿತು. ಗೌರಿ ಚೆಪ್ಪಲಿಯನ್ನೂ, ಕಸಪರಿಕೆಯನ್ನೂ ತಿವಿಯುವಂತೆ ತೋರಿಸುತ್ತಲೇ ಇದ್ದಳು. ಗೋದಾವರಿಗೆ ತುಂಬಾ ಅವಮಾನವಾಗಿ ಹೋಯಿತು.

ಬಯ್ಗಳಿಗೆ ಪ್ರತಿ ಬಯ್ಗಳು ಬಾರದಿದ್ದರೆ ಗೆಲ್ಲುವುದು ಹೇಗೆ? ಅಲ್ಲದೆ ಊರವರೆಲ್ಲಾ ಸೇರಿ ನಗುತ್ತಿದ್ದಾರೆ.

"ಛೀ! ಈ ಹಾಳು ಊರಿನಲ್ಲಿ ಇನ್ನು ನಾನು ಇರಲಾರೆ." ಎನ್ನುತ್ತಾ ಅಲ್ಲಿಂದ ಹೊರಟುಹೋದಳು. ಹೋದವಳು ತನ್ನ ಸಾಮಾನುಗಳನ್ನೆಲ್ಲಾ ಮೂಟೆಕಟ್ಟಿಕೊಂಡು ಆ ಊರುಬಿಟ್ಟೇ ಹೋಗಿಬಿಟ್ಟಳು.

ಒಂದು ಮಾತೂ ಆಡದೆ, ಆ ಗಯ್ಯಾಳಿಯನ್ನು ಓಡಿಸಿದ ಗೌರಿಯ ಬುದ್ಧಿವಂತಿಕೆಗೆ ಎಲ್ಲರೂ ಮೆಚ್ಚಿದರು. ಬಹುಮಾನವಾಗಿ ಇಟ್ಟಿದ್ದ ಹಣವನ್ನು ಇಮ್ಮಡಿಗೊಳಿಸಿ, ದೊಡ್ಡ ಸಭೆಯಲ್ಲಿ ಅವಳಿಗೆ ಕೊಟ್ಟು ಸಂತೋಷಪಡಿಸಿದರು.





# ಆಪ್ತರಾರು?

ಒಂದಾನೊಂದು ಕಾಲದಲ್ಲಿ ಧರ್ಮದತ್ತ ನೆಂಬ ಬಹಳ ಒಳ್ಳೆಯವನಾದ ವೈಶ್ಯನೊಬ್ಬ ನಿದ್ದ. ಅವನಿಗೆ ರಾಜದತ್ತ, ಧನದತ್ತ ಎಂಬ ಇಬ್ಬರು ಕುಮಾರರಿದ್ದರು.

ಮೊದಲು ಧರ್ಮದತ್ತನು ಬಹಳ ಬಡವನಾಗಿದ್ದ. ಆದರೆ ಅದೃಷ್ಟದಿಂದಲೂ, ಬುದ್ಧಿವಂತಿಗೆಯಿಂದಲೂ ಕೋಟೀಶ್ವರನಾಗಿಬಿಟ್ಟ. ಅವನ ವ್ಯಾಪಾರದ ಹಡಗುಗಳು ಎಲ್ಲಾ ಸಮುದ್ರಗಳಲ್ಲಿಯೂ ತಿರುಗುತ್ತಿದ್ದುವು. ಎಲ್ಲಾ ವಸ್ತು ಸಾಮಗ್ರಿಗಳೂ ಅವನ ವ್ಯಾಪಾರಕ್ಕೆ ಸಂಬಂಧಿಸಿ, ಅವನಿಗೆ ಲಾಭ ತಂದು ಕೊಟ್ಟುವುಗಳೇ ಆಗಿದ್ದುವು.

ಧರ್ಮದತ್ತನಿಗೆ ಐವತ್ತು ವರ್ಷ ಮೀರಿ ಹೋಯಿತು. ಕುಮಾರರು ದೊಡ್ಡವರಾದರು. ಅವರು ವ್ಯಾಪಾರದ ತಂತು ತಂತ್ರಗಳನ್ನು ತಿಳಿದುಕೊಂಡು ತಂದೆಗೆ ಸಹಾಯಕರಾಗಿದ್ದರು. ಈಗ ಧರ್ಮದತ್ತನಿಗೆ ಎಂತಹ ಚಿಂತೆಯೂ, ವಿಚಾರವೂ ಇಲ್ಲ. ಆದರೂ ಅವನ ಮನಸ್ಸಿಗೆ ಏನೋ ಒಂದು ನೋವಿತ್ತು. ಅದು ಏನೋ ಹೇಳಲು ಬರಲಿಲ್ಲ.

ಒಂದು ದಿನ ಅವನು ಹೀಗೆ ಆಲೋಚನೆ ಮಾಡಿದನು—"ನನ್ನ ಮಕ್ಕಳಿಬ್ಬರೂ ನನ್ನ ಹಾಗೆಯೇ ಆಗಿಬಿಟ್ಟಿದ್ದಾರೆ. ಇನ್ನು ಅವರಿಗೆ ನನ್ನ ಸಹಾಯವೇ ಅವಶ್ಯವಿಲ್ಲ. ನನಗೆ ಕೂಡ ಮುದುಕತನವು ಬಂತು. ನಾನು ಇದುವರೆಗೂ ಹೇಳಿಕೊಳ್ಳುವಂತಹ ಉಪಕಾರವನ್ನು ಕೂಡಾ ಯಾರಿಗೂ ಮಾಡಿಲ್ಲ. ವ್ಯಾಪಾರದಲ್ಲಿ ನನ್ನಿಂದ ಕೆಡಕು ಹೊಂದಿದವರು ಬಹಳ ಮಂದಿ ಇರುವರು. ಅವರಲ್ಲಿ ಒಬ್ಬರಿಗಾದರೂ ಸಹಾಯ ಮಾಡಿದರೆ, ಒಂದು ಪರಮಾರ್ಥವನ್ನಾದರೂ ಸಾಧಿಸಿದ ಹಾಗೆ ಆಗುತ್ತದೆ. ನನಗೆ ಸ್ವಲ್ಪ ಮನಶ್ಶಾಂತಿ ಸಿಕ್ಕೀತು."

ಈ ಆಲೋಚನೆಯನ್ನೆ ಗಟ್ಟಿಮಾಡಿಕೊಂಡು ಅವನು ತನ್ನ ಕುಮಾರರಿಬ್ಬರನ್ನೂ ಬಳಿಗೆ ಕರೆದನು. ವ್ಯಾಪಾರವನ್ನೆಲ್ಲಾ ಅವರಿಬ್ಬರಿಗೇ ಒಪ್ಪಿಸಿದನು. ತಂತ್ರಗಳನ್ನೆಲ್ಲಾ ಹೇಳಿದನು. ತರುವಾಯ—"ಮಕ್ಕಳಿರಾ, ನಾನು ನಾಳೆ ಮುಂಜಾನೆ ಬೇಗನೇ ಎದ್ದು ದೇಶಾಂತರಕ್ಕೆ ಹೊರಟು ಹೋಗುತ್ತೇನೆ. ಕೆಲವು ದಿನಗಳವರೆಗೆ ಹಿಂದಿರುಗಿ ಬರುವುದಿಲ್ಲ" ಎಂದನು.

ಎಂ. ಜಿ. ಶಾಸ್ತ್ರಿ, ಶ್ರೀರಾಮಪುರ

ಇದನ್ನು ಕೇಳಿ ಕುಮಾರರು ಸ್ವಲ್ಪ ವ್ಯಸನ ಪಟ್ಟರು. ಆದರೆ ಯಜಮಾನಿಕೆಯೆಲ್ಲವೂ ತಮ್ಮ ಕೈಗೆ ಬಂದುದಕ್ಕಾಗಿ ಒಳಗೊಳಗೇ ಆನಂದವೂ ಇತ್ತು.

ಮರುದಿನ ಧರ್ಮದತ್ತನು ಉಷಃಕಾಲದಲ್ಲಿಯೇ ಎದ್ದು ದೇಶಾಂತರಕ್ಕೆ ಹೊರಡಲು ಸಿದ್ಧನಾದನು. ಕುಮಾರರನ್ನು ಬಳಿಗೆ ಕರೆದು, "ಹುಡುಗರೇ, ಹೋಗಿಬರುತ್ತೇನೆ, ಜಾಗ್ರತೆ!" ಎಂದು ಹೇಳಿ ಹೊರಟನು. ಆಗ ಅವನ ಕೈಯಲ್ಲಿ ಒಂದು ಸಣ್ಣ ಸಂಚಿ ಮಾತ್ರವೇ ಇತ್ತು.

ಆ ಸಂಚಿಯಲ್ಲಿ ಏನುಂಟು ಎಂಬುದು ಆ ಕುಮಾರರಿಗೆ ಗೊತ್ತಿರಲಿಲ್ಲ. ಅದನ್ನು ನೋಡಿರುತ್ತಿದ್ದರೆ ಅವರಿಗೆ ಆಶ್ಚರ್ಯವಾಗುತ್ತಿತ್ತು.

ಧರ್ಮದತ್ತನು ದೇಶಾಂತರಕ್ಕೆ ಹೋಗುವೆನೆಂದನೇ ಹೊರತು, ಅವನು ಆ ನಗರವನ್ನು ಬಿಟ್ಟು ಮತ್ತೆಲ್ಲಿಗೂ ಹೋಗಲಿಲ್ಲ. ಹೊತ್ತು ಮುಳುಗುವವರೆಗೂ ಅಲ್ಲಿ ಇಲ್ಲಿ ತಿರುಗಿದನು. ಕತ್ತಲೆ ತಲೆಹಾಕುತ್ತಲೇ ನಗರದ ಕೊನೆಯಲ್ಲಿ ಗತಿಹೀನರು ವಾಸಮಾಡುವ ಒಂದು ಕೇರಿಗೆ ಹೋದನು. ಅಲ್ಲೊಂದು ನಿರ್ಜನ ಪ್ರದೇಶದಲ್ಲಿ ತನ್ನ ವೇಷವನ್ನು ಮಾರ್ಪಡಿಸಿಕೊಂಡನು. ಇನ್ನು ಯಾರಿಗೂ ಅವನ ಗುರುತು ಸಿಗುವ ಹಾಗಿರಲಿಲ್ಲ.

ಚೆನ್ನಾಗಿ ಕತ್ತಲಾಯಿತು. ಚಳಿಗಾಲವಾದುದರಿಂದ, ಎಲ್ಲರೂ ಅವರವರ ಮನೆಗಳಲ್ಲಿ ಬಾಗಿಲು ಭದ್ರಪಡಿಸಿಕೊಂಡು ಮಲಗಿದ್ದರು. ಅಲ್ಲಲ್ಲಿ ನಾಯಿಗಳು ಮಾತ್ರ ಬಗುಳುತ್ತಿದ್ದುವು.



ಧರ್ಮದತ್ತನು ನಡೆಯುತ್ತಾ ಒಂದು ಗುಡಿಸಲಿನ ಬಳಿಯಲ್ಲಿ ನಿಂತು — "ಅಮ್ಮಾ, ಬಹಳ ದೂರದಿಂದ ಬಂದಿದ್ದೇನೆ, ಮುದುಕ, ತುಂಬಾ ದಣಿದಿದ್ದೇನೆ; ಈ ರಾತ್ರಿ ನನಗೆ ಆಸರೆ ಕೊಡುವಿರಾ?" ಎಂದು ಪ್ರಾರ್ಥಿಸಿದನು.

"ಯಾರು ಅಯ್ಯಾ, ಒಳಕ್ಕೆ ಬನ್ನಿ" ಎಂದು ಒಂದು ಸ್ತ್ರೀಕಂಠವು ಕೇಳಿತು. ಧರ್ಮದತ್ತನು ತಡಿಕೆಯನ್ನೆತ್ತಿಕೊಂಡು ಒಳಕ್ಕೆ ಹೋದನು.

ಆ ಗುಡಿಸಲಿನಲ್ಲಿ ಇರುವುವಾರೋ ಧರ್ಮದತ್ತನಿಗೆ ಚೆನ್ನಾಗಿ ಗೊತ್ತಿತ್ತು. ಅಲ್ಲಿ ಒಬ್ಬಳು ವಿತಂತುವೂ ಅವಳ ಮೂವರು ಮಕ್ಕಳೂ ಇದ್ದರು. ಬಹಳ ದಿನಗಳ ಕೆಳಗೆ ಸತ್ತುಹೋದ ಸೋಮಗುಪ್ತನ ಹೆಂಡತಿ ಮಕ್ಕಳೇ ಅವರು. ಈ ಸೋಮಗುಪ್ತನು ಒಂದುಸಾರೆ ವ್ಯಾಪಾರದಲ್ಲಿ ಧರ್ಮದತ್ತನೊಡನೆ ಸ್ಪರ್ಧೆಮಾಡಿದ್ದನು.




ಆದರೆ ಸೋತುಹೋದ. ಅವನ ಕುಟುಂಬವು ಕಷ್ಟದಲ್ಲಿ ಬಿತ್ತು. ಕಡೆಗೆ ಅವನು ದಿವಾಳಿಯಾಗಿ ಅದೇ ವ್ಯಸನದಿಂದ ಸೊರಗಿಸೊರಗಿ ಸತ್ತುಹೋದನು. ಅವನ ಹೆಂಡತಿ ಈಗ ನಗರದ ಹೊರಗೆ ದರಿದ್ರ ಕೇರಿಯಲ್ಲಿ ವಾಸಮಾಡುತ್ತಾ ಬಹಳ ಕಷ್ಟದಿಂದಿದ್ದಳು.

ಆ ಗುಡಿಸಲಿನೊಳಗೆ ಅಡಿಯಿಡುತ್ತಲೇ ಧರ್ಮದತ್ತನ ಹೃದಯವನ್ನು ಯಾರೋ ಕಲಕಿದಂತಾಯಿತು. "ಈ ಕುಟುಂಬದ ದುಸ್ಥಿತಿಗೆ ನಾನೇ ಕಾರಣನಲ್ಲವೇ?" ಎಂದುಕೊಂಡನು. ಅವರಾರೂ ಅವನ ಗುರುತು ಹಿಡಿದಿಲ್ಲ. ಪ್ರೀತಿಯಿಂದಲೇ ಆಹ್ವಾನಿಸಿ ಸತ್ಕರಿಸಿದರು.

ಆ ಬಡ ಕುಟುಂಬವನ್ನು ನೋಡುತ್ತಲೇ ಧರ್ಮದತ್ತನಿಗೆ ಒಂದು ತರದ ಸಂತೋಷವೂ ಆಯಿತು. ಅವರ ಮುಖಗಳಲ್ಲಿ ದಾರಿದ್ರ್ಯದ ಗುರುತುಗಳಿದ್ದುವು. ಆದರೂ ಅವರು ಸಂಕಟಪಡುವವರಂತೆ ಕಾಣಲಿಲ್ಲ. ಧರ್ಮದತ್ತನ ಮನೆಯಲ್ಲಿ ಅಷ್ಟೈಶ್ವರ್ಯಗಳೂ ಇದ್ದುವು. ಆದರೆ ಒಬ್ಬರನ್ನು ನೋಡಿದರೆ ಒಬ್ಬರಿಗಾಗುತ್ತಿರಲಿಲ್ಲ. ಕೆಲಸದಾಳುಗಳು ಸಹಾ ಜಗಳವಾಡಿಕೊಂಡೇ ಇದ್ದರು.

ಧರ್ಮದತ್ತನು ಆದಿನ ರಾತ್ರಿ ಆ ಮನೆಯಲ್ಲಿಯೇ ಉಂಡು, ಅಲ್ಲಿಯೇ ಮಲಗಿದನು. ಪಂಚಭಕ್ಷ್ಯಪರಮಾನ್ನಗಳು ಅಲ್ಲಿರದಿದ್ದರೂ ಇದ್ದುದರಲ್ಲಿ ಇಲ್ಲವೆನ್ನದೆ ಅವನಿಗೆ ಬಡಿಸಿದರು. ಅವನಿಗೆ ಅದು ಅಮೃತತುಲ್ಯವೆನಿಸಿತು. ಬೆಳಗ್ಗೆ ಎದ್ದು "ಅವನು ಅಮ್ಮಾ, ನಾನು ಹೋಗಿ ಬರುತ್ತೇನೆ. ಊರಿನೊಳಗೆ ಸ್ವಲ್ಪ ಕೆಲಸವಿದೆ" ಎಂದನು. ಆದರೆ ಮನೆಯವಳು ಉಪಚಾರ ಮಾಡುತ್ತಾ "ಎಲ್ಲಗೋ ಹೋಗಿ ಯಾಕೆ ಕಷ್ಟಪಡಬೇಕು? ಇಲ್ಲಿಯೇ ಇರಿ" ಎಂದಳು. ಧರ್ಮದತ್ತನು ಒಳಗೊಳಗೆ ಸಂತೋಷಪಡುತ್ತಾ "ಸರಿ" ಎಂದನು.

ಹೀಗೇ ಹತ್ತುದಿನ ಕಳೆಯಿತು. ಧರ್ಮದತ್ತನು ಆ ಮನೆಯಲ್ಲಿಯೇ ತೃಪ್ತಿಕರವಾದ ಆತಿಥ್ಯವನ್ನು ಹೊಂದಿದನು. ಒಂದು ದಿನ ಅವನು ಗೃಹಿಣಿಯನ್ನು ಕುರಿತು—"ನಾನು ಯಾರೋ ತಿಳಿಯದಿದ್ದರೂ ನನಗೆ ಆಶ್ರಯ ಕೊಟ್ಟೆ. ನಿಜವಾಗಿ ನೀವೆಲ್ಲಾ ಬಹಳ ಒಳ್ಳೆಯವರು" ಎಂದನು.

"ಅಯ್ಯಾ! ನೀವು ಯಾರಾದರೇನೀಗ? ನಿಮಗಿಷ್ಟು ಹಾಕಿಬಿಟ್ಟರೆ ನಮ್ಮ ಐಶ್ವರ್ಯವು ಕರಗಿಹೋದೀತೆ?" ಎಂದಳವಳು.



"ನಾನು ಹತ್ತು ದಿನದಿಂದ ನಿಮ್ಮಲ್ಲಿರುವೆ ನಲ್ಲ?" ಎಂದನು ಧರ್ಮದತ್ತ.

"ಆದರೇನಾಯಿತು? ನಿಮಗಾಗಿ ನಾವು ಏನೂ ಪ್ರತ್ಯೇಕ ಕಷ್ಟಪಟ್ಟಿಲ್ಲ. ಇದ್ದದರಲ್ಲಿ ನೀವೂ ಕೊಂಚ ತಿನ್ನುವಿರಿ. ನಿಮಗೆ ವಯಸ್ಸಾಯಿತು. ಪರದೇಶಕ್ಕೆಲ್ಲ ಹೋದರೆ ನಿಮಗೆ ಎಷ್ಟು ಕಷ್ಟವಾಗಲಿಕ್ಕಿಲ್ಲ!" ಎಂದು ಆ ಮನೆಯವಳೆಂದಳು.

ಅದಕ್ಕೆ ಧರ್ಮದತ್ತನು,—"ಅಮ್ಮ, ನಾನು ನಿಜವಾಗಿಯೂ ಪರದೇಶಿಯಲ್ಲ. ಇದೇ ಊರಿನವನೇ ನನ್ನ ಹೆಸರು ಧರ್ಮದತ್ತ. ಈಗ ನನ್ನ ಗುರುತು ನಿನಗೆ ತಿಳಿಯಿತೆ?"

"ಧರ್ಮದತ್ತನನ್ನು ಕುರಿತು ಕೇಳಿದ್ದೇ ಹೊರತು ನೋಡಿಲ್ಲ ನಾನು. ಆದರೆ ಧರ್ಮದತ್ತನು ಕೋಟೀಶ್ವರನಂತಲ್ಲ? ಈ ಹರಕು ಬಟ್ಟೆಯಿಂದ ನೀವು 'ನಾನೇ ಧರ್ಮದತ್ತ' ಅಂದರೆ ಯಾರು ನಂಬಿಯಾರು?" ಎಂದಳು ಅವಳು.

ಆಗ ಧರ್ಮದತ್ತನು ಸೋಮಗುಪ್ತನಿಗೂ ತನಗೂ ಸ್ಪರ್ಧೆಬಿದ್ದುದೂ, ಅವನನ್ನು ಸೋಲಿಸಿ, ತಾನು ಗೆದ್ದುದೂ ಎಲ್ಲಾ ವಿವರಿಸಿ ಹೇಳಿ ಮತ್ತೆ, ಕೆಲವು ಕಾರಣಗಳಿಂದ ತನ್ನ ಸ್ಥಿತಿಗತಿಗಳೂ ಈಗ ಇಳಿದುಹೋಗಿ ಪರಾಶ್ರಯವನ್ನು ಹುಡುಕುತ್ತಾ ಬಂದೆನೆಂದು ಕೂಡಾ ಹೇಳಿದನು.

ಆ ಹೆಂಗುಸು ಏನೂ ಅಡ್ಡಮಾತು ಹೇಳಲಿಲ್ಲ. ಒಂದು ನಿಟ್ಟುಸಿರು ಬಿಟ್ಟು—"ಅಯ್ಯೊ! ಜರುಗಿಹೋದದ್ದು ಹೋಯಿತು. ಈಗೇಕೆ? ನೀವೀಗ ಈ ವಯಸ್ಸಿನಲ್ಲಿ ಎಲ್ಲಿಗೆ ಹೋಗಿ ಏನು ಮಾಡಲಾದೀತು? ಇಲ್ಲಿಯೇ ಇದ್ದುಬಿಡಿ. ನಿಮಗೇನೂ ಕೊರತೆಯಾಗದಂತೆ ನೋಡಿಕೊಳ್ಳುತ್ತೇನೆ" ಎಂದಳು ಬಹಳ ಪ್ರೀತಿಯಿಂದ. ಧರ್ಮದತ್ತನು ಅದಕ್ಕೆ ಒಪ್ಪಿಕೊಂಡು, 'ಯಾವುದಕ್ಕೂ ಒಂದುಸಾರಿ ನಗರದೊಳಗೆ ಹೋಗಿ ಬರುತ್ತೇನೆ'ಂದು ಹೇಳಿ ಹೊರಟನು.

ಆ ಸಾಯಂಕಾಲವೇ ಧರ್ಮದತ್ತನು, ತನ್ನೊಂದಿಗೆ ತಂದಿದ್ದ ಸಂಚಿಯನ್ನೆತ್ತಿ ಕೊಂಡು, ತಿರುಗಿ ತನ್ನ ಮನೆಗೇ ಬಂದು ಸೇರಿದನು. ತಂದೆಯನ್ನು ನೋಡಿ ಅವನ ಕುಮಾರರಾದ ರಾಜದತ್ತ, ಧನದತ್ತರಿಬ್ಬರೂ—"ಏನಪ್ಪಾ, ಅಷ್ಟು ಬೇಗ ಬಂದಿಯಲ್ಲಾ? ನಿನ್ನ ವಿಷಯವೇ ದಿನಾ ಮಾತಾಡುತ್ತಿದ್ದೇವೆ" ಎಂದರು.

"ಓಹೋ" ಎಂದುಕೊಂಡು ಧರ್ಮದತ್ತನು– "ಒಂದು ಜರೂರು ಕೆಲಸವಿತ್ತು. ಅದಕ್ಕೇ ತಿರುಗಿ ಬಂದೆ. ನನಗೆ ಈಗಲೇ ಒಂದು ಇಪ್ಪತ್ತೈದು ಸಾವಿರ ವರಾಹಗಳು ಬೇಕಿತ್ತು. ಕೊಡಿ" ಎಂದನು.

"ಅಯ್ಯೋ! ಈಗ ಹೇಗೆ? ಮನೆಯಲ್ಲಿ ರೊಕ್ಕವಿಲ್ಲವಲ್ಲಾ!" ಎಂದು ಹಿರಿಯವನು ಮುಖ ಸೊಟ್ಟಮಾಡಿದನು.

"ಇಷ್ಟು ಹಣ ನಿನಗೆ ಯಾಕೆ ಅಪ್ಪಾ?" ಎಂದು ಚಿಕ್ಕವನು ಕೇಳಿದ.

"ನಾನು ಒಬ್ಬರಿಗೆ ಸಹಾಯ ಮಾಡಬೇಕೆಂದು ಯೋಚಿಸಿದ್ದೇನೆ." ಎಂದನು ಧರ್ಮದತ್ತ.

ಇದನ್ನು ಕೇಳಿ ಕುಮಾರರಿಬ್ಬರಿಗೂ ಕೋಪ ಬಂತು: "ಬೆವರು ಸುರಿಸಿ ಸಂಪಾದಿಸಿದ ಹಣವನ್ನೆಲ್ಲಾ ಈ ವಿಧವಾಗಿ ಬೇಡದ ಕೆಲಸಕ್ಕೆಲ್ಲಾ ಹಾಳು ಮಾಡುವುದೇ? ಲೋಕದಲ್ಲಿ ಎಲ್ಲಿಯಾದರೂ ಹೀಗುಂಟೆ?" ಎಂದು ಕೂಗಾಡಿದರು. ಅವರ ಶಬ್ದಕ್ಕೆ ಅಕ್ಕಪಕ್ಕದವರೂ ಅಲ್ಲಿ ಬಂದು ಗುಂಪು ಗೂಡಿದರು.

ಆಗ ಧರ್ಮದತ್ತನು ಹೇಳಿದ:—ಹುಡುಗರಿರಾ, ಸಿಟ್ಟು ಮಾಡಬೇಡಿ. ನಾನು ನಿಮಗೆ ಕೋಟಿ ಕೋಟಿ ಸಂಪಾದನೆ ಮಾಡಿಕೊಟ್ಟೆ. ಬೆಳೆಸಿ ದೊಡ್ಡವರನ್ನಾಗಿ ಮಾಡಿದೆ. ಆದರೆ ನೀವು ನನಗಾಗಿ ಒಂದೆರಡುನೂರು ವರಾಹಗಳನ್ನು ಕೊಡಲಾರದೇ ಹೋದಿರಿ. ನಿಮ್ಮ ವಿಷಯ ನನಗೆ ಮೊದಲೇ ಗೊತ್ತಿತ್ತು. ಅದಕ್ಕೇ ತಕ್ಕ ಜಾಗ್ರತೆಯಿಂದಿದ್ದೇನೆ. ಇಗೋ ನೋಡಿರಿ!" ಎಂದು ಸಂಚಿಯೊಳಗಿರುವುದನ್ನು ತೋರಿಸಿದನು. ಅದರಲ್ಲಿ ಬೆಲೆಬಾಳುವ ಮಣಿಗಳೂ ರತ್ನಗಳೂ ಇದ್ದುವು. ಇದನ್ನು ನೋಡಿ ಮಕ್ಕಳಿಬ್ಬರೂ ಬೆಪ್ಪಾದರು. ಎಲ್ಲರಿಗೂ ಆಶ್ಚರ್ಯವಾಯಿತು. ಧರ್ಮದತ್ತನು ಮಾತ್ರ ತಲೆಯೊಲಿದುಕೊಳ್ಳುತ್ತಾ ಹೊರಗೆ ನಡೆದನು.

ಅಂದು ಸಂಜೆ ತುಂಬಾ ಆಯಾಸದಿಂದ ಧರ್ಮದತ್ತನನ್ನು ದಿವಂಗತ ಸೋಮಗುಪ್ತನ ಹೆಂಡತಿಯೂ ಮಕ್ಕಳೂ ತುಂಬಾ ಆದರಿಸಿದರು. ಧರ್ಮದತ್ತನು ಎಲ್ಲಿಗೆ ಹೋದುದೋ. ಆ ಸಂಚಿ ವಿಷಯ ಏನು ರಗಳೆಯಾಯಿತೋ ಅವರಿಗೆ ಗೊತ್ತಿಲ್ಲ. ಆದರೆ ಕಾಲಕ್ರಮೇಣ ಧರ್ಮದತ್ತನ ಆದೊಂದು ಧರ್ಮದಿಂದ, ಅವಳ ಮಕ್ಕಳು ಒಳ್ಳೆಯ ಸ್ಥಿತಿಗೆ ಬಂದು ಬಾಳಿದರು.



# ಅಭೇದ್ಯ

ಪೂರ್ವಕಾಲದಲ್ಲಿ ಅಶ್ವವತೀ ರಾಜಧಾನಿಯಲ್ಲಿ ಶೂರಸಿಂಹನೆಂಬ ರಾಜನಿದ್ದನು. ಅವನ ತಾತನ ಕಾಲದಲ್ಲಿ ಅವರ ರಾಜ್ಯವು ಬಹಳ ದೊಡ್ಡದಾಗಿತ್ತು. ಆದರೆ ಶೂರಸಿಂಹನ ತಂದೆ ರಾಜ್ಯಭಾರದಲ್ಲಿ ಮನಸ್ಸಿಲ್ಲದೆ, ತನ್ನ ಸುಖವನ್ನೆ ನೋಡಿಕೊಳ್ಳುತ್ತಿದ್ದನು. ಆದ್ದರಿಂದ ನೆರೆ ರಾಜರು ಆಗಾಗ ಇವನ ರಾಜ್ಯದ ಮೇಲೆ ಆಕ್ರಮಣ ಮಾಡಿ, ರಾಜ್ಯದ ಬಹು ಭಾಗವನ್ನು ಅಪಹರಿಸಿಕೊಂಡುಬಿಟ್ಟಿದ್ದರು.

ಶೂರಸಿಂಹನು ತಂದೆಯ ಹಾಗಲ್ಲ: ಬಹು ಸಮರ್ಥನು, ಧೀರನು, ದೀಕ್ಷಾಪರನು. ಅವನು ಪಟ್ಟಕ್ಕೆ ಬಂದಮೇಲೆ, ತನ್ನ ತಂದೆ ಮಾಡಿದ ಅಕ್ರಮಗಳನ್ನೆಲ್ಲಾ ಸರಿಗೊಳಿಸಲಾರಂಭಿಸಿದನು. ವಿವೇಕಿಗಳೂ, ಬುದ್ಧಿವಂತರೂ ಆದವರನ್ನು ಹುಡುಕಿ, ಅವರಿಗೆ ರಾಜ್ಯದ ವಿವಿಧ ವಿಭಾಗಗಳಲ್ಲಿ ಉದ್ಯೋಗಗಳನ್ನು ಕೊಡಿಸಿದನು. ಇದರಿಂದ ಪ್ರಜೆಗಳಿಗೆಲ್ಲಾ ಹೊಸ ಆಶೆಯೂ ಉತ್ಸಾಹವೂ ಉಂಟಾಯಿತು.

ಹೀಗಿರುತ್ತಾ, ಶೂರಸಿಂಹನು ತನ್ನ ತಂದೆ ಹೋಗಲಾಡಿಸಿಕೊಂಡ ರಾಜ್ಯಗಳನ್ನೆಲ್ಲಾ ತಿರುಗಿ ಜಯಿಸಿಕೊಳ್ಳಲು ಉಪಕ್ರಮಿಸಿದನು. ಅವನ ಯುದ್ಧಸನ್ನಾಹದಲ್ಲಿ ಪ್ರಜೆಗಳೆಲ್ಲಾ ಪಾಲುಗೊಂಡರು. ಕತ್ತಿ, ಈಟಿ, ಢಾಲು, ಬಾಣ ಮೊದಲಾದ ಆಯುಧಗಳನ್ನು ಹೇರಳವಾಗಿ ನಿರ್ಮಾಣ ಮಾಡಿದರು. ಅನೇಕ ಲಕ್ಷ ಪ್ರಜೆಗಳು ಸೈನ್ಯದಲ್ಲಿ ಸೇರಿ ಸೈನಿಕ ವಿದ್ಯೆ ಕಲಿತರು. ಬಲವಾದ ಸೈನ್ಯವೂ, ಸೈನ್ಯಕ್ಕೆ ತಕ್ಕ ಆಯುಧಗಳೂ ಸಿದ್ಧವಾದುವು. ರಾಜ್ಯಗಳಲ್ಲೆಲ್ಲಾ ಯುವಕರು ವೇದೋಕ್ತವಾಗಿ ರಣದೀಕ್ಷೆಯನ್ನು ಪಡೆದರು. ಶೂರಸಿಂಹನು ತನ್ನ ತಾತಂದಿರ ಕಾಲದ ರಾಜ್ಯಗಳನ್ನು ತಿರುಗಿ ಸಂಪಾದಿಸಲಿಕ್ಕಾಗಿ ಜೈತ್ರಯಾತ್ರೆ ಹೊರಟನು.

ಈ ಜೈತ್ರಯಾತ್ರೆ ಒಂದೆರಡು ವರ್ಷಗಳವರೆಗೆ ನಿರ್ವಿಘ್ನವಾಗಿ ಸಾಗಿತು. ಕೆಲವು ರಾಜ್ಯಗಳು ಶೂರಸಿಂಹನ ಸೈನ್ಯವನ್ನು ನೋಡಿ ಹೆದರಿ ರಾಜಿ ಮಾಡಿಕೊಂಡುವು. ಮತ್ತೆ ಕೆಲವರು ಶೂರಸಿಂಹನು ತಮ್ಮ ಸಂಬಂಧಿಕನೆಂಬ ಕಾರಣದಿಂದ, ಯುದ್ಧಮಾಡದೆ ಸ್ನೇಹಮಾಡಿಕೊಂಡರು. ಯುದ್ಧವು ಜರುಗಿದಲ್ಲೆಲ್ಲಾ ಶೂರಸಿಂಹನಿಗೇ ವಿಜಯವಾಯಿತು. ವಿಜಯ

ಕೆ. ಆರ್. ಸಿಂಹ, ಮದಿಹಾಳ



ವಾದಂತೆ ಅವನ ಪರಾಕ್ರಮವೂ, ಅವನ ಸೈನಿಕರ ಉತ್ಸಾಹವೂ ಇಮ್ಮಡಿಸಿತು.

ಈ ವಿಧವಾಗಿ ಒಂದೊಂದೇ ರಾಜ್ಯವನ್ನು ಗೆಲ್ಲುತ್ತಾ, ಸೋತ ರಾಜರನ್ನು ಔದಾರ್ಯದಿಂದ ನಡೆಸುತ್ತಾ, ಹಳೇ ಶತ್ರುಗಳೊಂದಿಗೂ ಅವರ ಸಂಬಂಧಿಕರೊಂದಿಗೂ, ತನ್ನ ಕ್ಷಮಾ ಗುಣಗಳಿಂದ ಪ್ರೇಮ ಸಂಪಾದನೆ ಮಾಡಿಕೊಳ್ಳುತ್ತಾ, ಶೂರಸಿಂಹನು "ಅಭೇದ್ಯ" ಎಂಬ ರಾಜ್ಯದ ಮೇರೆಗೆ ಬಂದು ಸೇರಿದನು.

ಅಭೇದ್ಯ ರಾಜ್ಯಕ್ಕೆ ಹೆಸರಿಗೆ ತಕ್ಕಂತೇ ಅಭೇದ್ಯವಾದ ಕೋಟೆಯಿತ್ತು. ಊರ ಸುತ್ತಾ ಮೂರು ಬಲವಾದ ಕೋಟೆಗಳಿದ್ದುವು. ಒಂದು ಲಕ್ಷ ಸೈನಿಕರು ಕೋಟೆಯ ಬುರುಜುಗಳ ಮೇಲೆ ಅಡಗಿಕೊಂಡು ಎಂತಹ ಪ್ರಬಲ ಸೈನ್ಯವನ್ನಾದರೂ ಒಳಗೆ ಬಾರದಂತೆ ತಡೆಯುತ್ತಿದ್ದರು.

ಅಲ್ಲದೆ ಇನ್ನೊಂದು ಒಳಕೋಟೆ ಬೇರೆ ಇತ್ತು. ಅದರೊಳಗೆ ಯಾರು ಸಿಕ್ಕಿಬಿದ್ದರೂ ಮತ್ತೆ ಹೊರಗೆ ಬರಲು ಸಾಧ್ಯವಿಲ್ಲ. ಆದ್ದರಿಂದ ಇನ್ನೊಬ್ಬರಿಗೆ ಬುದ್ಧಿ ಹೇಳುವಷ್ಟು ಶಕ್ತಿ ಈ ಅಭೇದ್ಯದ ರಾಜರಿಗಿತ್ತು. ಶೂರಸಿಂಹನ ತಂದೆಯ ಅಸಮರ್ಥತೆಯನ್ನು ಗಮನಿಸಿದ ಅಭೇದ್ಯರಾಜನು, ಅವನ ರಾಜ್ಯದಲ್ಲಿ ಕೊಂಚ ಭಾಗವನ್ನು ಅಪಹರಿಸಿದ್ದನು. ಅದನ್ನು ತಿರುಗಿ ಪಡೆಕೊಳ್ಳಲಿಕ್ಕಾಗಿಯೇ ಶೂರಸಿಂಹನು ಈಗ ದಂಡೆತ್ತಿ ಬಂದಿದ್ದ.

ಎಂತಹ ಮಹಾ ಸಮರ್ಥನಿಗಾದರೂ ಅಭೇದ್ಯಕೋಟೆ ದುರ್ಭೇದ್ಯವೇ ಸರಿಯೆಂದೂ, ಸುಮ್ಮನೆ ಮುತ್ತಿಕೊಂಡು ಕುಳಿತುಕೊಳ್ಳಬೇಕಾದ್ದೇ ಹೊರತು ಬೇರೇನೂ ಮಾರ್ಗವಿಲ್ಲವೆಂದೂ, ಒಂದೇಬಾರಿ ಬಲಪ್ರಯೋಗಮಾಡಿ ಒಳಹೊಕ್ಕರೆ, ತಮ್ಮ ಸೈನ್ಯವೆಲ್ಲಾ ನಾಶವಾಗಿ ಹೋಗುವುದೇ ಖಂಡಿತವೆಂದೂ, ಶೂರಸಿಂಹನ ಸೇನಾ ನಾಯಕನು ಹೇಳಿದನು.

"ಏನೇ ಇರಲಿ, ಅಭೇದ್ಯರಾಜನು ರಾಜಿಗೆ ಬರುವವರೆಗೂ ನಾವು ಕೋಟೆಯ ಮುತ್ತಿಗೆ ತೆಗೆಯುವುದಿಲ್ಲ" ಎಂದನು ಶೂರಸಿಂಹ.

ಈ ಖಂಡಿತ ವಾರ್ತೆಯನ್ನು ಒಬ್ಬ ದೂತನೊಡನೆ ಹೇಳಿ ಕೋಟೆಯೊಳಗೆ ಕಳುಹಿಸಿದನು. ಆ ದೂತನಿಗೆ ಕೋಟೆಯೊಳಗೆ ನಿರಾತಂಕ

ವಾಗಿ ಪ್ರವೇಶವಾಯಿತು. ನೇರಾಗಿ ರಾಜಸೌಧ ವನ್ನು ಮುಟ್ಟಿದನು. ರಾಜಭಟರು ಅವನನ್ನು ಕರೆದೊಯ್ದು ಒಬ್ಬಳು ರಾಜಕುಮಾರಿಯ ಇದಿರಿನಲ್ಲಿ ನಿಲ್ಲಿಸಿದರು.

ಆ ಕುಮಾರಿ ರಾಜಲಾಂಛನಗಳನ್ನು ಧರಿಸಿ ಕೊಂಡು ಪೂರ್ಣಚಂದ್ರನಂತೆ ಬೆಳಗುತ್ತಿದ್ದಳು. ಅವಳ ವಯಸ್ಸು ಹತ್ತೊಂಭತ್ತು ಅಥವಾ ಇಪ್ಪತ್ತು. ಅವಳು ಶೂರಸಿಂಹನ ದೂತನನ್ನು ಸುಖಾಸೀನಗೊಳಿಸಿ, ಬಂದ ಕೆಲಸವನ್ನು ಹೇಳುವಂತೆ ಕೇಳಿದಳು.

"ಕ್ಷಮಿಸಬೇಕು, ನಾನು ತಂದ ಸಂದೇಶ ವನ್ನು ಅರಸರ ಮುಂದೆ ಹೊರತು, ಮತ್ತಾರ ಮುಂದೂ ನಿವೇದಿಸುವಂತಿಲ್ಲ" ಎಂದ ದೂತ.

"ನಾನೇ ಅರಸಿ. ನನ್ನ ತಂದೆಯವರು ಅಸ್ವಸ್ಥರಾಗಿದ್ದಾರೆ. ಕೊಂಚಕಾಲದಿಂದ ಈಗ ನಾನೇ ರಾಜ್ಯಭಾರವನ್ನು ನೋಡಿಕೊಳ್ಳು ತ್ತಿದ್ದೇನೆ" ಎಂದಳು ಆ ಸುಂದರಿ, ತನ್ನ ಬೆರಳಿ ನಲ್ಲಿರುವ ರಾಜಮುದ್ರೆಯನ್ನು ತೋರಿಸುತ್ತಾ.

"ದೇವಿಯವರೆ, ನಮ್ಮನ್ನಾಳುವ ಶೂರ ಸಿಂಹ ಮಹಾರಾಜರು ಹೀಗೆ ಹೇಳಿ ಕಳುಹಿ ಸಿದ್ದಾರೆ. ನಿಮ್ಮ ಕೋಟೆಯನ್ನು ನಾವು ಮುತ್ತಿಗೆ ಹಾಕಿದ್ದೇವೆ. ನೀವು ನಮ್ಮೊಂದಿಗೆ ನಮ್ಮ ಇಚ್ಛಾನುಸಾರವಾಗಿ ಸಂಧಿಮಾಡಿ ಕೊಳ್ಳುವವರೆಗೂ ನಾವು ಮುತ್ತಿಗೆ ತೆಗೆಯು ಲಾರೆವು. ಈ ಮುತ್ತಿಗೆಯಿಂದ ನಿಮಗೆ ಆಗುವ ಕಷ್ಟನಷ್ಟಗಳಿಗೆ ನೀವೇ ಬಾಧ್ಯರು" ಎಂದನು ದೂತ.



ಅಭೇದ್ಯರಾಣಿ ಕೊಂಚಹೊತ್ತು ಆಲೋ ಚಿಸಿ, "ಈ ಅಂತಃಪುರವನ್ನು ಮುತ್ತಿಗೆ ಹಾಕುವವರೆಗೆ ಕೋಟೆ ನಿಮ್ಮ ವಶವಾಗುವು ದಿಲ್ಲ. ಅಭೇದ್ಯದ ಅರಸಿಯಾದ ರೂಪವತಿ ಹೀಗೆ ಹೇಳಿದಳೆಂದು ನಿಮ್ಮ ಅರಸರೊಡನೆ ಹೇಳಬೇಕು" ಎಂದಳು.

ರಾಜದೂತನಿಗೆ ಈ ಸಂದೇಶವು ಅರ್ಥ ವಾಗಲಿಲ್ಲ. ಆದರೆ ಅವನು ವಿವರಣೆಯನ್ನು ಕೇಳಲಿಲ್ಲ. ಕುಮಾರಿ ರಾಣಿ ಅವನಿಗೆ ತಮ್ಮ ಕೋಟೆಯೊಳಗಿನ ಸ್ಥಿತಿಗಳನ್ನು ನೋಡುವ ಏರ್ಪಾಡು ಮಾಡಿದಳು.

ಅವನು ತನ್ನ ಕುದುರೆಯಮೇಲೆ ಕೋಟೆಯ ವಿವಿಧ ಪ್ರಾಂತಗಳಿಗೆ ಹೋಗಿ ಪರಿಸ್ಥಿತಿಗಳನ್ನು



ನೋಡಿದನು. ಎಲ್ಲಾ ಪ್ರಶಾಂತವಾಗಿದ್ದುವು. ಬಡಿಗೆಗಳನ್ನು ಹಿಡಿದುಕೊಂಡಿದ್ದ ಸಾಮಾನ್ಯ ಭಟರ ಹೊರತು ಸೈನಿಕರಾರೂ ಕಾಣಿಸಲಿಲ್ಲ. ಯುದ್ಧವನ್ನು ಕುರಿತೇ ಯಾರೂ ಮಾತಾಡುತ್ತಿರಲಿಲ್ಲ. ಅವರೆಲ್ಲರೂ ನಿಶ್ಚಿಂತೆಯಿಂದ ಕಾಲ ಕಳೆಯುವಂತೆ ತೋರಿತು. ಇದನ್ನೆಲ್ಲಾ ನೋಡಿ ರಾಜದೂತನು ಹಿಂದಿರುಗಿ ಶೂರಸಿಂಹನ ಬಳಿಗೆ ಬಂದನು.

ಅವನು ಹೇಳಿದ ಮಾತುಗಳನ್ನು ಕೇಳಿ ಶೂರಸಿಂಹನಿಗೆ ಬಹಳ ಆಶ್ಚರ್ಯವಾಯಿತು. ರೂಪವತಿಯ ಸಂದೇಶ ಅವನಿಗೂ ಏನೂ ಅರ್ಥವಾಗಲಿಲ್ಲ. ಆ ಹುಡುಗಿಗೆ ಯುದ್ಧದ ಶಾಸ್ತ್ರವು ತಿಳಿಯದೆ ಏನೋ ಬಾಯಿಗೆ ಬಂದಂತೆ ಹೇಳಿರಬಹುದು. ಅನುಭವವಿಲ್ಲದ ಕುಮಾರಿರಾಣಿ. ಅವಳೊಂದಿಗೆ ರಾಯಭಾರ ಮಾಡುವುದು ವ್ಯರ್ಥವೇ ಸರಿ, ಎಂದುಕೊಂಡನು.

ಅಭೇದ್ಯದಲ್ಲಿ ಪ್ರಜೆಗಳು ನಿರ್ವಿಚಾರವಾಗಿರುವುದೂ, ಎಲ್ಲಿಯೂ ಸೈನಿಕರು ಇಲ್ಲದಿರುವುದೂ, ರೂಪವತಿಯ ಅನುಭವ ಶೂನ್ಯತೆಯನ್ನೇ ವ್ಯಕ್ತಪಡಿಸುವುದಲ್ಲವೆ? ಅನುಭವ ಇದ್ದವಳಾದರೆ ಯುದ್ಧ ಕಾಲದಲ್ಲಿ ಶತ್ರುದೂತರಿಗೆ ಕೋಟೆಯೊಳಗಿನ ಸ್ಥಿತಿಗಳನ್ನೆಲ್ಲಾ ತೋರಿಸುವಳೆ?

ಶೂರಸಿಂಹನಿಗೆ ಒಂದು ಯೋಚನೆ ಬಂತು. ಧಾಳಿ ಮಾಡಿಬಿಟ್ಟರೆ ಸುಲಭವಾಗಿ ಕೈಗೆ ಸಿಕ್ಕುವ ಕೋಟೆಯನ್ನು ಮುತ್ತಿಗೆ ಹಾಕಿ ಕಾಲಿತುಕೊಳ್ಳುವುದೇಕೆ? ಈ ಅನುಭವವಿಲ್ಲದ ರಾಣಿಯ ಕೈಯಿಂದ, ಈ ಕೋಟೆ ಹೇಗೂ ಪರರಾಜರ ವಶವಾಗುವುದು ಖಂಡಿತ. ತಾನೇಕೆ ಸುಮ್ಮನಿರಬೇಕು?

ಕೋಟೆಯೊಳಗೆ ಯುದ್ಧಪ್ರಯತ್ನವೇ ಇಲ್ಲವೆಂಬ ವಾರ್ತೆ ಶೂರಸಿಂಹನ ಸೈನಿಕರೊಳಗೆಲ್ಲಾ ಉತ್ಸಾಹವನ್ನು ಹೆಚ್ಚಿಸಿತು. ಕೋಟೆಯ ಮೇಲೆ ದಾಳಿ ತೆಗೆಯಲಿಕ್ಕೆ ಎರಡು ದಳಗಳು ಸಿದ್ಧವಾದುವು. ಒಂದು ದಳವು ಕೋಟೆಯ ಗೋಡೆಗಳನ್ನು ಏರಿತು. ಇನ್ನೊಂದು ದಳವು ದ್ವಾರವನ್ನು ಭೇದಿಸಲಿಕ್ಕೆ ಹೊರಟಿತು.

ಈ ಎರಡು ದಳಗಳ ಕೆಲಸಗಳೂ ನಿರ್ವಿಘ್ನವಾಗಿಯೇ ನೆರವೇರಿದುವು. ಕೋಟೆಯ

ದ್ವಾರವು ದೂಡಿದ ಕೂಡಲೇ ತನ್ನಂತೆಯೇ ತೆರೆದುಕೊಂಡುವು.

ಕೆಲವು ಸೈನಿಕರು ಒಳಗೆ ಪ್ರವೇಶಿಸಿದರು. ಮತ್ತೆ ಬಾಗಿಲು ಮುಚ್ಚಿಕೊಂಡುವು. ಕೋಟೆಯ ಗೋಡೆಯನ್ನು ಏರಿದ ಸೈನಿಕರಿಗೆ ಕೂಡಾ ಏನೊಂದು ಪ್ರತಿಭಟನೆಯೂ ಉಂಟಾಗಿಲ್ಲ. ಆದರೆ ಒಳಗೆ ಹೊಕ್ಕ ಸೈನಿಕರು ಮತ್ತೆ ತಿರುಗಿಬರಲಿಲ್ಲ!

ಅವರ ಗತಿ ಏನಾಯಿತೋ ಶೂರಸಿಂಹನಿಗೂ ತಿಳಿಯಲಿಲ್ಲ. ಎರಡುದಿನ ತಾಳಿ ಶೂರಸಿಂಹನು ಮತ್ತೊಂದು ದೊಡ್ಡ ದಾಳಿಯನ್ನು ಕಳುಹಿಸಿದನು. ಅದರ ಗತಿಯೂ ಮೊದಲಿನಂತೆಯೇ ಆಯಿತು.

ಆ ಸೈನ್ಯಗಳೆಲ್ಲಾ ಅಭೇದ್ಯದ ಒಳಕೋಟೆಯೊಳಗೆ ಸಿಕ್ಕಿಬಿದ್ದು ಹೋಗಿದ್ದುವು. ಶೂರಸಿಂಹನಿಗೆ ಆಶ್ಚರ್ಯದ ಮೇಲೆ, ತುಂಬಾ ಯೋಚನೆಯೂ ಹಿಡಿಯಿತು.

ಬಳಿಕ ಶೂರಸಿಂಹನು ಇನ್ನೊಂದು ರಾಯಭಾರವನ್ನು ಕಳುಹಿಸಿದನು. ಒಂದು ವಾರದೊಳಗೆ ಕೋಟೆ ತನ್ನವಶವಾಗದಿದ್ದರೆ, ತಾನು ಸರ್ವಸೈನ್ಯದೊಂದಿಗೆ ಒಂದೇಬಾರಿ ಧಾಳಿ ಮಾಡಿ, ಕೋಟೆಯನ್ನು ವಶಪಡಿಸಿಕೊಳ್ಳುವೆನೆಂದೂ, ಘೋರ ಯುದ್ಧವಾದರೆ ನಿಮ್ಮ ಸರ್ವನಾಶವಾದೀತೆಂದೂ ಬೆದರಿಸಿದನು. ಆಗಲೂ ರೂಪವತಿ ಕೊಟ್ಟ ಉತ್ತರ: 'ಅಂತಃಪುರವನ್ನು ಮುತ್ತಿದರಷ್ಟೇ ಕೋಟೆ ನಿಮ್ಮ ವಶವಾದೀತು" ಎಂಬುದೇ!




ಶೂರಸಿಂಹನಿಗೆ ಬಹಳ ಕೋಪ ಬಂತು. ರೂಪವತಿ ತಾನು ಊಹಿಸಿಕೊಂಡಷ್ಟು ಮೂಢಳಲ್ಲವೆಂದು ತೋರಿತು. ಅವಳು ತನ್ನನ್ನು ಪರಿಹಾಸ ಮಾಡುವಂತಿದೆ. ಅವಳಿಗೆ ಅಷ್ಟು ಗರ್ವವೆ? ಹೊರಗಿನಿಂದ ಯಾವ ಪದಾರ್ಥಗಳೂ ಒಳಗೆ ಹೋಗಲಿಕ್ಕಿಲ್ಲದೆ ಅವರೆಲ್ಲಾ ಹೇಗೆ ಬದುಕುವರು? ಸುತ್ತುಮುತ್ತಿನ ಗ್ರಾಮಗಳನ್ನುಕೂಡಾ ತನ್ನ ಸೈನ್ಯಗಳು ಕೊಳ್ಳೆಹೊಡೆದಿವೆ. ಬಿಸಿಲಿಗೂ ಮಳೆಗೂ ಚಳಿಗೂ ಅಪರಿಮಿತ ಬಾಧೆಯಾಗುತ್ತಿದೆ. ಈ ಮುತ್ತಿಗೆ ಶೂರಸಿಂಹನಿಗೇ ಬೇಸರಿಕೆಯಾಗಿದೆ. ಇನ್ನು ಒಳಗಿನವರಿಗೆ ಹೇಗಿರಬೇಕು? ಈ ಸಂಗತಿ ಆ ಕುಮಾರಿರಾಣಿಗೆ ತಿಳಿಯುದೆ? ಅವಳು



ಯಾಕೆ ಸಂಧಿಗೆ ಬರಕೂಡದು? ಈ ಅರ್ಥವಿಲ್ಲದ ಪ್ರತ್ಯುತ್ತರವೇನಿದು?

ಏನಾದರೂ ಸರಿ, ರೂಪವತಿಯ ಗರ್ವ ಮುರಿಯುವ ವರೆಗೂ ಮುತ್ತಿಗೆ ಸಾಗಿಸಿಯೇ ತೀರುವುದು. ಅವನು ಕೋಟೆಯ ಬಾಗಿಲಿಗೆದಿರಾಗಿ, ತನ್ನ ಗುಡಾರವನ್ನು ಹಾಕಿಸಿಕೊಂಡು, ನೋಡುತ್ತಾ ಕುಳಿತನು. ರೂಪವತಿ ಬಾಗಿಲು ತೆರೆದುಕೊಂಡು ತನ್ನೊಡನೆ ರಾಜಿಗೆ ಬರುತ್ತಾಳೋ ಎಂದು ಅವನು ನೋಡುತ್ತಿದ್ದನು.

ಅಲ್ಲದೆ, ದೂತರು ಅವಳ ಸೌಂದರ್ಯವನ್ನು ಹೇಳಿದ ಬಗೆಯಿಂದ, ಅವಳನ್ನೊಮ್ಮೆ ನೋಡಬೇಕೆಂಬ ಆಕಾಂಕ್ಷೆ ಕೂಡಾ ಶೂರಸಿಂಹನ ಹೃದಯದಲ್ಲಿ ಇದ್ದೇ ಇತ್ತು. ಆದರೆ ಅವನಾಗಿ ಹೋಗುವುದು ಹೇಗೆ? ಅವನ ಆಶೆ ದಿನೇದಿನೇ ಹೆಚ್ಚುತ್ತಿತ್ತು.

ತಿಂಗಳುಗಳು ಕಳೆದುವು. ಆಕಾಶದಲ್ಲಿ ಚಂದ್ರನು ಎಷ್ಟೋಸಾರಿ ಅದೃಶ್ಯನಾಗಿಯೂ ಹೋದನು. ಸಣ್ಣದಾಗಿ ತೋರಿದ ಚಂದ್ರನು ದೊಡ್ಡದೊಡ್ಡದಾಗುತ್ತಾ ಬಂದನು. ಮರಳಿ ಸಣ್ಣಗಾದನು. ಚಂದ್ರನಂತೆಯೇ ಶೂರಸಿಂಹನ ಸ್ಥಿತಿಯೂ ಆಯಿತು.

ಬರಬರುತ್ತಾ ಶೂರಸಿಂಹನ ಸ್ಥಿತಿ ಬಹಳ ಹೀನವಾಯಿತು. ಕೋಟೆಯ ಐದಾರು ಹರದಾರಿಯವರೆಗೆ ಊರಾಗಲೀ ವ್ಯವಸಾಯವಾಗಲೀ ಇಲ್ಲದೇಹೋಯಿತು. ಶೂರಸಿಂಹನು ಅಭೇದ್ಯವನ್ನು ಮುತ್ತಿಗೆ ಹಾಕಿದರೆ, ಶೂರಸಿಂಹನನ್ನು ದೇವರು ಮುತ್ತಿದ ಹಾಗಾಯಿತು. ಅವನ ಸೈನಿಕರಿಗೆ ಸರಿಯಾದ ತಿಂಡಿ ಸಿಕ್ಕುವುದೂ ಕಷ್ಟವಾಗುತ್ತಾ ಬಂತು.

ಈ ಮುತ್ತಿಗೆಯಿಂದ ತಾನೇ ಸೋಲುವಂತೆ ಶೂರಸಿಂಹನ ಅಂತರಾತ್ಮಕ್ಕೆ ತೋರ ತೊಡಗಿತು. ಈ ಯುದ್ಧದಲ್ಲಿ ಮಾತ್ರವಲ್ಲದೆ ತನ್ನ ಮೇಲೆಯೇ ಅವನಿಗೆ ವಿರಕ್ತಿ ಹುಟ್ಟತೊಡಗಿತು. ಸೈನಿಕರಿಗೂ ಹಾಗೆಯೇ ಹಿಂದಿರುಗಿ ಹೋದರೆ ಸಾಕೆನಿಸಿತು. ಶೂರಸಿಂಹನು ಹಿಂದಿರುಗುವ ದಿನವನ್ನು ಹಿಂದೆ ಹಿಂದೆ ಹಾಕುತ್ತ ಬಂದನು.

ಆ ರಾತ್ರಿ ಬಟ್ಟಚಂದ್ರನು ಆಕಾಶದಲ್ಲಿ ಬೆಳಗುತ್ತಿದ್ದನು. ಅರ್ಧರಾತ್ರಿಯಾಗುವ ವೇಳೆ,

ಶೂರಸಿಂಹನಿಗೆ ನಿದ್ರೆ ಬರಲಿಲ್ಲ. ಅವನು ತನ್ನ ಗುಡಾರದ ಹೊರಗೆ ನಿಂತುಕೊಂಡು ರೂಪವತಿಯನ್ನು ಕುರಿತು ಯೋಚಿಸುತ್ತಿದ್ದನು. ಅವಳು ಮುಗ್ಧೆಯೋ ಜಾಣೆಯೋ ಎಂಬ ಸಂದೇಹವೇನೂ ಈಗ ಇಲ್ಲ.



ಅವಳ ಮೇಲೆ ಅವನಿಗೆ ಎಷ್ಟೋ ಗೌರವ ಭಾವವುಂಟಾಗಿತ್ತು. ಒಮ್ಮೆ ಅವಳನ್ನು ನೋಡಬೇಕೆಂಬ ಕೋರಿಕೆ ಬಹಳ ತೀವ್ರವಾಯಿತು. ತಾನು ಏನು ಮಾಡುವೆನೆಂಬುದನ್ನು ತಿಳಿಯದೆಯೇ ಕೋಟೆಯ ಬಾಗಿಲ ಬಳಿಗೆ ಹೋಗಿ ಬಾಗಿಲು ತಟ್ಟಿದನು. ಕೂಡಲೇ ಬಾಗಿಲು ತೆರೆದುಕೊಂಡಿತು.

"ಯಾರು ನೀವು?" ಎಂದು ಬಾಗಿಲು ತೆರೆದ ಭಟರು ಕೇಳಿದರು.

"ಶರೂಸಿಂಹನ ದೂತ" ಎಂದನು ಶೂರಸಿಂಹ.

"ಸುಸ್ವಾಗತ! ದಯಮಾಡಿ" ಎಂದು ಭಟರು ಮರ್ಯಾದೆಯಿಂದ ಅವನನ್ನು ಒಳಗೆ ಕಳುಹಿಸಿದರು.

ಮುಂದೆ ರೂಪವತಿಯ ಭಟರು ಅವನನ್ನು ಕರೆದೊಯ್ದು, ಅಂತಃಪುರಕ್ಕೆ ಸೇರಿಸಿ, ಸುಖವಾಗಿ ಮಲಗಲಿಕ್ಕೆ ಏರ್ಪಾಡನ್ನು ಮಾಡಿ ಕೊಟ್ಟರು. ಆದರೆ ಅವನು ನಿದ್ರಿಸಲಿಲ್ಲ. ಯಾವಾಗ ಬೆಳಗಾಗುವುದೋ ಎಂದು ಕಣ್ಣು ಬಿಡಿಸಿಕೊಂಡೇ ಇದ್ದನು.

ಬೆಳಗಾಗುತ್ತಲೇ ಯಾರೂ ಅವನಿಗೆ ಅಡ್ಡಿ ಮಾಡಲಿಲ್ಲ. ಅವನ ಹಿಂದೆ ಕಾವಲುಗಾರರೂ ಹೊರಡಲಿಲ್ಲ. ಶೂರಸಿಂಹನು ಸ್ವೇಚ್ಛೆಯಾಗಿ ಕೋಟೆಯೊಳಗಿನ ಆವರಣವನ್ನೆಲ್ಲಾ ತಿರುಗಿದನು. ಎಲ್ಲಿ ನೋಡಿದರೂ ಸೊರಗಿ ಬಾಡಿ ಎಲುಬುಗೂಡುಗಳಾಗಿಹೋದ ಮನುಷ್ಯರೇ ಅವನ ಕಣ್ಣಿಗೆ ಬಿದ್ದರು. ಕೋಟೆಯೊಳಗೆಲ್ಲಾ ದಟ್ಟದಾರಿದ್ರ್ಯವು ತುಂಬಿತ್ತು. ಒಬ್ಬ ಮುದುಕನು ಶೂರಸಿಂಹನನ್ನು ನೋಡಿ—"ನೀವಾರೋ ಪರದೇಶದವರಂತಿದ್ದೀರಿ. ನನ್ನ ಆತಿಥ್ಯವನ್ನು ಸ್ವೀಕರಿಸಿರಿ. ಹಿಂದೆ ಪಂಚಭಕ್ಷ್ಯ ಪರಮಾನ್ನದಿಂದ ಆತಿಥ್ಯವಿತ್ತ ನಾವು, ಈಗ ಗಂಜಿನೀರಿಗೂ ಗತಿಯಿಲ್ಲದ ಸ್ಥಿತಿಯಲ್ಲಿದ್ದೇವೆ" ಎಂದನು.

ಶೂರಸಿಂಹನ ಕಣ್ಣು ಮಂಜಾದುವು.

ಅವನು ನೇರಾಗಿ ಅಂತಃಪುರಕ್ಕೇ ತಿರುಗಿದನು. ರೂಪವತಿ ದರ್ಶನವೀಯಲಿಕ್ಕೆ ಸಿದ್ಧಳಾಗಿರುವಂತೆ ತಿಳಿಯಿತು. ಭಟರು ಅವನನ್ನು ರೂಪವತಿಯ ಸಮಕ್ಷಮಕ್ಕೆ ಕರೆದೊಯ್ದರು.

ಅವಳು, ನೋಡುತ್ತಲೇ ಅವನನ್ನು ಗುರ್ತಿಸಿಬಿಟ್ಟಳು. ಒಡನೇ ಅಂತ್ಯಂತ ಗೌರವ ಮರ್ಯಾದೆಗಳಿಂದ—"ದೂತ ಕಾರ್ಯಕ್ಕೆ ತಾವೇ ವಿಜಯ ಮಾಡಿದಿರಿ. ದೂತರಿಲ್ಲವೆ?" ಎಂದಳು,

ಶೂರಸಿಂಹನು ಒಂದುಕ್ಷಣ ಮಾತಾಡಲಿಲ್ಲ. ಅವಳ ಸೌಂದರ್ಯವನ್ನು ಕುರಿತು ದೂತರು ಹೇಳಿದುದರಲ್ಲಿ ಏನೂ ಅತಿಶಯೋಕ್ತಿ ಇಲ್ಲವೆನಿಸಿತು. ಆದರೆ ಪ್ರಜೆಗಳಂತೆಯೇ ಅವಳೂ ಸೊರಗಿಕೊಂಡು ಕಾಣಿಸುತ್ತಿದ್ದಾಳೆ ಅಷ್ಟೆ.

"ನಿನ್ನ ಹಟವು ನನಗೆ ಅರ್ಥವಾಗಲಿಲ್ಲ. ನಿನ್ನ ಪ್ರಜೆಗಳು ಆಹಾರವಿಲ್ಲದೆ ಹಾಹಾಕಾರ ಮಾಡುತ್ತಿರುವಾಗ, ನನ್ನ ಮುತ್ತಿಗೆಯನ್ನು ಉದ್ದ ತೆಗೆಸುವುದೇಕೆ? ಸಂಧಿಗೆ ಬರಬಾರದೆ?" ಎಂದು ಶೂರಸಿಂಹನು ಕೇಳಿದನು.

"ಈ ಕೋಟೆಯನ್ನು ಜಯಿಸಲೇ ಬೇಕೆಂಬುದು ನಿಮ್ಮ ಸಂಕಲ್ಪವಾದರೆ, ಅಂತಃಪುರವನ್ನು ಮುತ್ತಿಗೆ ಹಾಕಿರಿ" ಎಂದಳು ರೂಪವತಿ. ಫಕ್ಕನೆ ಶೂರಸಿಂಹನಿಗೆ ಅವಳ ಮಾತು ಈಗ ಅರ್ಥವಾಯಿತು.

ಕೂಡಲೇ ಅವನು ಕುಳಿತಲ್ಲಿಂದೆದ್ದು ಅವಳ ಬಳಿಗೆ ಹೋಗಿ "ರೂಪಾ! ನನ್ನ ಅಪರಾಧವನ್ನು ಕ್ಷಮಿಸು. ನನ್ನನ್ನು ಅನುಗ್ರಹಿಸಿ ಮದುವೆಯಾಗು. ಇನ್ನು ನಾವಿಬ್ಬರೂ ಶತ್ರುಗಳಾಗಿರಲು ಸಾಧ್ಯವಿಲ್ಲ" ಎಂದನು.

ರೂಪವತಿ ಅವನನ್ನು ಎಬ್ಬಿಸಿ ತನ್ನ ಆಸನದಲ್ಲಿಯೇ ಕುಳ್ಳಿರಿಸಿಕೊಂಡು, ಮಂತ್ರಿಗಳಿಗೆ ಹೇಳಿಕಳುಹಿಸಿದಳು. ಅಂತಃಪುರವು ಶೂರಸಿಂಹನ ವಶವಾಗಿಹೋಯಿತು.

ಸ್ವಲ್ಪ ಹೊತ್ತಿಗೆಲ್ಲಾ ಕೋಟೆಯ ದ್ವಾರವು ತೆರೆದುಕೊಂಡಿತು. ಒಳಗೋಟೆಯಲ್ಲಿ ಸಿಕ್ಕಿಬಿದ್ದ ಸೈನಿಕರೆಲ್ಲಾ ಬಿಡುಗಡೆಯಾದರು. ಶೂರಸಿಂಹನ ಸೈನ್ಯಗಳು ಕೋಟೆಯೊಳಗೆ ಹೊಕ್ಕವು. ಅಭೇದ್ಯವು ಶೋಭಾಯಮಾನವಾಗಿ ಬೆಳಗಿತು. ಶುಭ ಮುಹೂರ್ತದಲ್ಲಿ ರೂಪವತೀ-ಶೂರಸಿಂಹರವಿವಾಹ ಮಹೋತ್ಸವವು ರಾಜವೈಭವದಿಂದ ನಡೆಯಿತು. ಎಲ್ಲರಿಗೂ ಸಂತೋಷವಾಯಿತು.



## ಮರೆಯುವೆನೆ ?

ಹಾಲನು ಕುಡಿಸಿ ಮನವನು ತಣಿಸಿ
ಬೆಳೆಸಿದ ತಾಯಿ ಮರೆಯುವೆನೆ?
ಅಕ್ಕರೆಯಿಂದಲಿ ತಕ್ಕ ಸಮಯದಲಿ
ಇಕ್ಕಿದೆ ಊಟವ ಮರೆಯುವೆನೆ?
ಎಣ್ಣೆಯ ಸವರಿದೆ ಬೆಣ್ಣೆಯ ತಿನಿಸಿದೆ
ಎನ್ನನು ಸಲಹಿದೆ – ಮರೆಯುವೆನೆ?
ಮಮತೆಯ ನಿಟ್ಟು ಕೆಲಸವ ಬಿಟ್ಟು
ಸ್ತನ್ಯವನಿತ್ತುದ ಮರೆಯುವೆನೆ?
ಕಾಡುವ ಎನಗೆ ಹಾಡುತ ಪದವಾ
ಆಡಲು ಕಲಿಸಿದೆ ಮರೆಯುವೆನೆ?
ಆಡುತ ಬೀಳಲು ಮಾಡದೆ ತಡವನು,
ಓಡುತ ಹಿಡಿದುದ ಮರೆಯುವೆನೆ?

—ಜೆ. ವಿ. ರಾಮಮೂರ್ತಿ, ಕೊಪ್ಪ

## ಕಿಟ್ಟುವಿನ ಕವನ

(ಪ್ರಾಸಕ್ಕೆ ಸರಿಯಾದ ಪದ ಜೋಡಿಸಿ)

೧. ರಂಗ ಕದ್ದ ಕೋಟು,
ಅವನಿಗೆ ಬಿತ್ತು....
೨. ಗದ್ದೆಯಲ್ಲಿ ಹುಟ್ಟಿತು, ಬೆಳೆ
ಬೆಳೆಗೆ ಬೇಕು....
೩. ಊರಲ್ಲಿ ಬಿತ್ತು ಬರಗಾಲ,
ಜನರಿಗೆ ಬಂತು....
೪. ಅಣ್ಣನಿಗೊಂದು ಲಗ್ನ,
ಬಹಳಾನಂದ....
೫. ಈಗಿನ ಕಾಲದ ಫೇಶನ್,
ಧಾನ್ಯಕ್ಕೆಲ್ಲಾ....
೬. ಮೋಟರಿಗೆ ಬೇಕು ಪೆಟ್ರೋಲು,
ಹೋಗುತ್ತಾ ಇದೆ....
೭. ಅಂದು ಕಿಟ್ಟುವಿನ ಜನನ,
ಅವನು ಬರೆದ ಈ....

ಕುಮಾರಿ ನಿರುಪಮಾ

## ಗಣಿತ – ರಂಗ

ಹತ್ತು ಹತ್ತು ಇಪ್ಪತ್ತು
ಮನೆಯಲಿ ಒಂದು ಬೆಕ್ಕಿತ್ತು
ಇಪ್ಪತ್ತು ಹತ್ತು ಮೂವತ್ತು
ದಿನಾಲು ಹಾಲು ಕುಡಿತಿತ್ತು
ಮುವ್ವತ್ತು ಹತ್ತು ನಾಲ್ವತ್ತು
ರಂಗನು ನೋಡಿದನಾ ಹೊತ್ತು
ನಾಲ್ವತ್ತು ಹತ್ತು ಐವತ್ತು
ಮೂಲೆಲಿ ಒಂದು ಕೋಲಿತ್ತು
ಐವತ್ತು ಹತ್ತು ಅರುವತ್ತು
ರಂಗನು ಹೊಂಚಿದ ಗುರಿಯಿತ್ತು
ಅರುವತ್ತು ಹತ್ತು ಎಪ್ಪತ್ತು
ಪಿಳಿಪಿಳಿನೋಡುತ ಬೆಕ್ಕಿತ್ತು
ಎಪ್ಪತ್ತು ಹತ್ತು ಎಂಭತ್ತು
ಹಾರಿದ ರಂಗನು ಕಾಲ್ಕಿತ್ತು
ಎಂಭತ್ತು ಹತ್ತು ತೊಂಭತ್ತು
ಬೆಕ್ಕೆದ್ದೋಡಿತು, ತಪ್ಪೋಯ್ತು
ತೊಂಭತ್ತು ಹತ್ತು ನೂರು!
ರಂಗನಿಗೆ ಪೆಟ್ಟು ಜೋರು!

—ಕೆ. ವಿ. ಪಾಟೀಲ, ಹುಬ್ಬಳ್ಳಿ

## ತಲೆತೆಗೆದರೆ

ಒಂದು ಧಾನ್ಯದ ತಲೆತೆಗೆದರೆ 'ಗರಿ'
ಒಂದು ಜಗಳದ ತಲೆ ಕಡಿದರೆ 'ಹಸು'
ಬ್ರಾಹ್ಮಣನ ತಲೆ ಕಡಿದರೆ 'ದೇವ'
ಕ್ಷೌರಿಕನ ತಲೆ ತೆಗೆದರೆ 'ತಂದೆ'
ವಾಸಸ್ಥಳದ ತಲೆ ಕಡಿದರೆ 'ಹೆಂಡತಿ'
ಗಣಪತಿಯ ತಲೆ ಕಡಿದರೆ 'ಮುಂದಾಳು'
ಇದೆಲ್ಲ ಹೇಗೆ?

(ಉತ್ತರಕ್ಕೆ 58 ನೇ ಪುಟ ನೋಡಿ)




# ದೀಪವಾರಿತು

ಒಂದು ಹಳ್ಳಿಯಲ್ಲಿ ಒಬ್ಬಾನೊಬ್ಬ ಅಗಸರವ ನಿದ್ದ, ಆ ಅಗಸರವನಿಗೆ ಒಂದು ಕತ್ತೆ ಇತ್ತು. ಒಂದು ದಿನ ಅಗಸನು ಒಗೆದು ಆರಿಸಿದ ಬಟ್ಟೆಗಳನ್ನೆಲ್ಲಾ ಕಟ್ಟಿ, ಕತ್ತೆಯ ಬೆನ್ನಿನ ಎರಡು ಪಕ್ಕಗಳಲ್ಲಿಯೂ ಹೇರಿಸಿಕೊಂಡು, ಬಾಯಿಯಿಂದ ಏನೋ ಹಾಡಿನ ರಾಗವನ್ನು ಹಾಡಿಕೊಂಡು ಹಳ್ಳಿಗೆ ಹಿಂದಿರುಗುತ್ತಿದ್ದನು. ಆಗ ಗುಡ್ಡದ ಬದಿಯಲ್ಲಿ ಏನೋ ಒಂದು ಶಬ್ದವನ್ನು ಕೇಳಿ ನಿಂತನು.

ಬಳಿಕ ಆ ಶಬ್ದವು ಬರುವ ದಿಕ್ಕಿಗೆ ಹೋದನು. ಅಲ್ಲಿ ಎದೆ ನೋವಿನಿಂದ ತುಂಬಾ ಸಂಕಟ ಪಡುತ್ತಿರುವ ಪರದೇಶಿಯೊಬ್ಬನಿದ್ದ. ಅವನನ್ನು ನೋಡಿ ಅಗಸರವನು ಕನಿಕರದಿಂದ, ತನ್ನೊಂದಿಗೆ ಬರುವಂತೆ ಕರೆದನು. ಅದಕ್ಕೆ ಅವನು "ಕದಲಲಾರೆ. ಕತ್ತೆಯಮೇಲೆ ಏರಿಸಿಕೊಂಡು ಹೋಗು" ಎಂದನು.

ಕತ್ತೆ ಹೊರುವಷ್ಟು ಮೂಟೆ ಆಗಲೇ ಇರುವುದರಿಂದ, ಅವನನ್ನು ಹೊರಲು ಕತ್ತೆಯಿಂದಾದೀತೆ?—ಹಾಗೆಂದು ಆ ದಿಕ್ಕಿಲ್ಲದವನನ್ನು ಆ ಪರಿಸ್ಥಿಯಲ್ಲಿ ಬಿಟ್ಟು ಹೋಗಲಿಕ್ಕೂ ಅವನ ಮನಸ್ಸು ಕೇಳಲಿಲ್ಲ. ಕಡೆಗೆ ಅವನು ಬಟ್ಟೆಯ ಮೂಟೆಗಳನ್ನು ತಾನು ಹೊತ್ತುಕೊಂಡು, ಆ ಪರದೇಶಿಯನ್ನು ಕತ್ತೆಯಮೇಲೆ ಕೂಡಿಸಿಕೊಂಡು, ಬಲುಕಷ್ಟದಿಂದ ಗುಡಿಸಲಿಗೆ ಬಂದು ಸೇರಿದನು.

ಅಗಸನ ಹೆಂಡತಿ ಒಳ್ಳೆಯವಳಾದರೂ ಸ್ವಲ್ಪ ಗಯ್ಯಾಳಿ. ಆ ಪರದೇಶಿಯನ್ನು ಅವನು ಮೆಲ್ಲನೆ ಇಳಿಸಿಕೊಂಡು ಮನೆಯೊಳಗೆ ಬರುವುದನ್ನು ನೋಡಿ ಅವಳು "ಇದೊಂದು ನನ್ನ ನೆತ್ತೀವೇಲೆ ಹಾಕಲು ತರುತ್ತೀಯಾ?" ಎಂದು ಬೇಸರಿಸಿಕೊಂಡಳು. ಅಗಸನು ಗುಟ್ಟಿನಿಂದ, ನಡೆದ ಸಂಗತಿ ಅವಳಿಗೆ ತಿಳಿಸಿದನು.

ಆ ಪರದೇಶಿಯ ಎದೆ ನೋವು ಕ್ರಮವಾಗಿ ಹೆಚ್ಚಾಯಿತು. ಅರ್ಧರಾತ್ರಿಯಾಗುವಷ್ಟರಲ್ಲಿ ಅವನು ಅಗಸರವನನ್ನು ಎಬ್ಬಿಸಿ— "ತಮ್ಮಾ, ಇನ್ನು ನಾನು ಬದುಕಲಾರೆ. ನನ್ನ ಗಂಟಿನಲ್ಲಿ ಗಂಧದ ಚಕ್ಕೆಯಿಂದ ಮಾಡಿದ ಸಣ್ಣ ಪೆಟ್ಟಿಗೆಯೊಂದುಂಟು. ಅದರಲ್ಲಿ...." ಇನ್ನೂ ಏನೋ ಪೂರ್ಣ ಹೇಳುವುದರೊಳಗೆ, ಅವನ ಪ್ರಾಣವು ಹೋಗಿಬಿಟ್ಟಿತು.

ಅಗಸರವಳು ಎದ್ದಳು. "ಹೂಂ. ಅಂದುಕೊಂಡಂತೆಯೇ ಆಯಿತು. ಇವನೊಬ್ಬ ಬಂದು

ಎಂ. ಕೆ. ಮೂರ್ತಿ, ಕೋಟೆಕಾರು

ನಮ್ಮ ಮನೆಯಲ್ಲಿ ಸತ್ತನಲ್ಲಾ. ಇವನ ಗಂಟು ತಿನ್ನಲಿಕ್ಕಾಗಿ ನಾವೇ ಕೊಂದಂತೆ ಯಾರಾದರೂ ಅಂದರೆ ಏನು ಗತಿ!" ಎಂದು ಅನೇಕ ವಿಧವಾಗಿ ಚಿಂತಿಸಿದಳು.

ಅಗಸರವನು ಚುರುಕಾದನು. "ಹಾಗಾದರೆ ಇವನ ಸಂಗತಿ ಯಾರಿಗೂ ಗೊತ್ತಾಗದಂತೆ, ಈ ಹೆಣವನ್ನು ತೆಗೆದುಕೊಂಡು ಹೋಗಿ ಹುಗಿದುಹಾಕಿ ಬಂದುಬಿಡುತ್ತೇನೆ" ಎಂದು, ಆ ಹೆಣವನ್ನು ಕತ್ತೆಯ ಮೇಲೆ ಹಾಕಿಕೊಂಡು ಸ್ಮಶಾನದ ಕಡೆಗೆ ಹೋದನು.

ಆಗ ಅವನನ್ನು ಒಬ್ಬ ಮನುಷ್ಯನು ಹಿಂಬಾಲಿಸುತ್ತಾ ಇದ್ದುದು ಅವನಿಗೆ ಗೊತ್ತಾಗಲೇ ಇಲ್ಲ. ಅವನು ಬೇರೆ ಯಾರೂ ಅಲ್ಲ. ಇದಿರು ಮನೆಯಲ್ಲಿದ್ದ ಒಬ್ಬ ಕ್ಷೌರಿಕ. ಅಗಸರವನು ಹೆಣವನ್ನು ಹುಗಿದು, ಮನೆಗೆ ಬಂದು ನಿಶ್ಚಿಂತೆಯಾಗಿ ನಿದ್ರೆಮಾಡಿದ. ಆದರೆ ಆ ಕ್ಷೌರಿಕನಿಗೆ ಮಾತ್ರ ನಿದ್ದೆ ಬರಲೇ ಇಲ್ಲ. ಅಗಸರವನಿಗೆ ಸತ್ತುಹೋದ ಮುದುಕನಿಂದ ಏನೋ ಗಂಟು ಸಿಕ್ಕಿರಬೇಕೆಂದೇ ಅವನ ಅನುಮಾನ.

ಬೆಳಗಾಗುತ್ತಲೇ ಕ್ಷೌರಿಕನು, ಆ ಗ್ರಾಮದ ದೊಡ್ಡಯ್ಯನ ಬಳಿಗೆ ಹೋಗಿ, 'ಅಗಸರವನು ಒಬ್ಬ ಪರದೇಶಿಯನ್ನು ಕತ್ತೆಯ ಮೇಲೆ ಕೂಡಿಸಿಕೊಂಡು ಬಂದು, ನಂತರ ರಾತ್ರಿಯಲ್ಲಿ ಏನೇನು ಜರುಗಿತೋ ಎಲ್ಲವನ್ನೂ ಹೇಳಿದನು.

ದೊಡ್ಡಯ್ಯನು ಕೂಡಲೇ ಆ ಅಗಸರವನನ್ನು ಬರಮಾಡಿ-"ಏನೋ ನೀನು ದೋಚಿ




ಕೊಂಡ ಹಣವನ್ನೆಲ್ಲಾ ಸರಿಯಾಗಿ ತಂದು ನನಗೆ ಒಪ್ಪಿಸುವೆಯೋ" ಇಲ್ಲವೊ? ಎಂದು ಬೆದರಿಸಿದನು.

ಅದಕ್ಕೆ ಅಗಸರವನು—"ಬುದ್ಧೀ, ಆಣೆ ಮಾಡಿ ಹೇಳುತ್ತೇನೆ. ಆ ಪರದೇಶಿಯ ಹತ್ತಿರ ಸವೆದ ಕಾಸು ಕೂಡಾ ಇರಲಿಲ್ಲ. ಅವನ ಮೂಟೆಯಲ್ಲಿ ಒಂದು ಸಣ್ಣ ಪೆಟ್ಟಿಗೆ ಮಾತ್ರವೇ ಇತ್ತು" ಎಂದನು.

ದೊಡ್ಡಯ್ಯನು ಆ ಪೆಟ್ಟಿಗೆಯನ್ನು ತರಿಸಿ ನೋಡಿದಾಗ, ಅದರೊಳಗೆ ಒಂದು ಹಳೆಯ ತಾಳೆಯೋಲೆಯೂ, ಎರಡು ಲೋಹದ ಚೂರುಗಳೂ ಹೊರತು ಮತ್ತೇನೂ ಇರಲಿಲ್ಲ. ಆ ತಾಳೆಯೋಲೆಯಲ್ಲಿ ಏನೋ ಗೀಚಿ ಹಾಕಿತ್ತು. ಅದೇನೂ ಅರ್ಥವಾಗಲಿಲ್ಲ. ದೊಡ್ಡಯ್ಯನು



ಚೇಸರದಿಂದ, ಕ್ಷೌರಿಕನಿಗೂ ಅಗಸನಿಗೂ ಎರಡೆರಡು ಬಯ್ದು ಕಳುಹಿಸಿಬಿಟ್ಟನು.

ಹೋಗುತ್ತಿರುವ ಅಗಸನನ್ನು ದೊಡ್ಡಯ್ಯನು ಹಿಂದಕ್ಕೆ ಕರೆದು–"ಈ ಬಾರಿ ನಿನ್ನನ್ನು ಕ್ಷಮಿಸಿಬಿಟ್ಟದ್ದೇನೆ. ಈ ಪೆಟ್ಟಿಗೆ ನಿನಗೇ ಇರಲಿ. ಆದರೆ ನೀನು ನನಗೆ ಇಷ್ಟು ಶ್ರಮ ಕೊಟ್ಟದ್ದಕ್ಕಾಗಿ ನಿನ್ನ ಕತ್ತೆಯನ್ನು ಇಲ್ಲಿ ಕಟ್ಟಿ ಹಾಕಿ ಹೋಗು. ಇದೇ ನಿನಗೆ ಶಿಕ್ಷೆ" ಎಂದನು.

"ಅಯ್ಯೋ! ಕರ್ಮವೆ! ಉಪಕಾರಕ್ಕೆಹೋಗಿ ನನ್ನ ಕತ್ತೆಯನ್ನು ಹೋಗಲಾಡಿಸಿಕೊಳ್ಳ ಬೇಕಾಯಿತೆ?" ಎಂದು ಗೊಣಗಿಕೊಳ್ಳುತ್ತಾ ತನ್ನ ಬಿಡದಿಗೆ ಬಂದು, ಆ ಗಂಧದ ಪೆಟ್ಟಿಗೆಯನ್ನು ಹೆಂಡತಿಯ ಕೈಗೆ ಕೊಟ್ಟು "ಇದನ್ನು ಬೆಂಕಿಗೆ ಹಾಕು" ಎಂದನು.

ಅವಳು ಆ ಪೆಟ್ಟಿಗೆಯೊಳಗಿರುವ ತಾಳೆಯೋಲೆಯ ಅಕ್ಷರಗಳನ್ನು ನೋಡಿದಳು. ಅವಳಿಗೆ ಆಶ್ಚರ್ಯವೆನಿಸಿತು. "ಇದೇನೋ ಯಾರಿಂದಾದರೂ ಓದಿಸಿ ನೋಡಬಾರದೆ?" ಎಂದಳು ಗಂಡನೊಂದಿಗೆ.

ಒಡನೇ ಅಗಸರವನು ಅದನ್ನೆತ್ತಿಕೊಂಡು ಶಾಸ್ತ್ರಿಗಳ ಮನೆಗೆ ಹೋಗಿ ಅವರಿಗೆ ತೋರಿಸಿದನು. ಶಾಸ್ತ್ರಿ ಅದನ್ನು ಓದಿನೋಡಿ— "ಇದೇನೋ ಮಂತ್ರ! ಈ ಮಂತ್ರವನ್ನು ಪಠಿಸಿದರೆ ಧನವೆಲ್ಲಾ ವಶವಾಗುವುದಂತೆ!....ಆದರೆ ಪ್ರಯೋಜನವಿಲ್ಲ. ಯಾಕೆಂದರೆ ಈ ಮಂತ್ರವನ್ನು ಪಠಿಸುವಾಗ ಪಂಚಲೋಹಗಳಿಂದ ಮಾಡಿದ ದೀಪವು ಬೆಳಗುತ್ತಿರಬೇಕಂತೆ. ಅಂತಹ ಪಂಚಲೋಹದ ದೀಪವು ನಮಗೆಲ್ಲಿ ಸಿಕ್ಕುತ್ತದೆ?" ಎಂದನು ಶಾಸ್ತ್ರಿ.

ಕೂಡಲೇ ಅಗಸನು ಮನೆಗೆ ಓಡಿಬಂದು ಆ ಗಂಧದ ಪೆಟ್ಟಿಗೆಯೊಳಗಿದ್ದ ಎರಡು ಲೋಹದ ಚೂರುಗಳನ್ನು ಪರೀಕ್ಷಿಸಿ ನೋಡಿ ಒಂದಕ್ಕೊಂದು ಹೊಂದಿಸಿದನು. ಕೂಡಲೇ ಅದು ಒಂದು ಹಣತೆ ದೀಪವಾಯಿತು. ಅದನ್ನು ಶಾಸ್ತ್ರಿಯ ಬಳಿಗೆ ತಂದನು. ಶಾಸ್ತ್ರಿ ಅದನ್ನು ಪರೀಕ್ಷಿಸಿ ನೋಡಿ, ಅದು ಪಂಚಲೋಹದ ಹಣತೆಯೆಂದು ತೀರ್ಮಾನಿಸಿದನು. ಬಳಿಕ ಆ ತಾಳೆಯೋಲೆಯನ್ನು ಪರೀಕ್ಷಿಸಿ—"ಆ ಪರದೇಶಿ ನಿನಗೆ ಎಲ್ಲಿ ನೋಡಲಿಕ್ಕೆ ಸಿಕ್ಕಿದ?" ಎಂದು ಕೇಳಿದನು. ಅದನ್ನೂ ಹೇಳಿದ ಅಗಸ. ಅದೇದಿನ ಅರ್ಧರಾತ್ರಿಯ ಸಮಯದಲ್ಲಿ

ಯಾರಿಗೂ ತಿಳಿಯದಂತೆ ಅಗಸನು ಬ್ರಾಹ್ಮಣನನ್ನು ಕರೆದುಕೊಂಡು ಆ ಗುಡ್ಡದ ಬಳಿಗೆ ಹೋದನು. ಆ ಪರದೇಶಿ ಕಾಣಿಸಿದ ಆ ಸ್ಥಳದಲ್ಲಿಯೇ ನಿಂತು, ತನ್ನ ಬಳಿಯಲ್ಲಿದ್ದ ಹಣತೆಯನ್ನು ಬೆಳಗಿಸಿದನು. ಆ ದೀಪದ ಬೆಳಕಿನಲ್ಲಿ ಶಾಸ್ತ್ರಿ ತಾಳೆಯೋಲೆಯಲ್ಲಿದ್ದ ಮಂತ್ರವನ್ನು ಪಠಿಸಿದನು.

ಆಗ ಕತಕತವೆಂಬ ಶಬ್ದವು ಕೇಳಿಬರತೊಡಗಿತು. ಸ್ವಲ್ಪ ಹೊತ್ತಿಗೆಲ್ಲಾ ಇದಿರಲ್ಲಿದ್ದ ಗುಡ್ಡದ ಬುಡದ ಬಾಗಿಲೊಂದು ತೆರೆದುಕೊಂಡಿತು. ಶಾಸ್ತ್ರಿಯೂ ಅಗಸನೂ ಆಶ್ಚರ್ಯಪಡುತ್ತಾ ಧೈರ್ಯ ತಂದುಕೊಂಡು ಮೆಲ್ಲನೆ ಆ ಬಾಗಿಲಿನೊಳಗೆ ಹೊಕ್ಕರು. ಕೆಳಗೆ ಮೆಟ್ಟಿಲಿದ್ದಿತು. ಅದನ್ನಿಳಿದಾಗ, ಅಲ್ಲಿ ಬ್ರಹ್ಮಾಂಡದಷ್ಟು ಅಗಲವಾದ ಕಂಚಿನೊಂದು ಬೋಗಣಿಯಿತ್ತು. ಅದರ ಬದಿಯಲ್ಲಿ ಬಿಚ್ಚುಗತ್ತಿಯನ್ನು ಹಿಡಿದಿದ್ದ ಯಕ್ಷನೊಬ್ಬನು ನಿಂತಿದ್ದ. "ದೀಪವನ್ನು ಮಾತ್ರ ಆರಿಸಬೇಡ" ಎಂದು ಶಾಸ್ತ್ರಿ ಅಗಸರವನನ್ನು ಎಚ್ಚರಿಸಿದನು.

ಯಕ್ಷನು ಏನೂ ಹೇಳದೆ ಬೊಂಬೆಯಂತೆ ನಿಂತಿದ್ದನು. ಶಾಸ್ತ್ರಿ ಅತ್ತಿತ್ತ ನೋಡುತ್ತ ಮೆಲ್ಲನೆ ಆ ಭೋಗಣಿಯ ಮುಚ್ಚಳವನ್ನೆತ್ತಿದನು. ಆಹ್! ಅದರೊಳಗೆಲ್ಲಾ ಅನರ್ಘವಾದ ರತ್ನಗಳು! ಆಭರಣಗಳು! ಬಂಗಾರಗಳು! ಮುತ್ತು ಮಾಲೆಗಳು! ಇಬ್ಬರೂ ತಮ್ಮತಮ್ಮ ವಸ್ತ್ರಗಳಲ್ಲಿ ಹಿಡಿಸಿದಷ್ಟು ಮೂಟೆ ಕಟ್ಟಿಕೊಂಡರು.



ಅನಂತರ ಅವರಿಬ್ಬರೂ ಈಚೆಗೆ ಬಂದು ದೀಪವನ್ನು ಆರಿಸಿಬಿಟ್ಟರು. ಒಡನೆಯೇ ಗುಡ್ಡದ ಬಾಗಿಲು ಮುಚ್ಚಿಹೋಯಿತು.

ದಾರಿಯಲ್ಲಿ ಬ್ರಾಹ್ಮಣನು ಅಗಸನನ್ನು ಕುರಿತು—"ಈ ರಹಸ್ಯವನ್ನು ನಿನ್ನ ಹೆಂಡತಿಗೆ ಕೂಡಾ ಹೇಳಬಾರದು" ಎಂದು ಎಚ್ಚರಿಸಿದನು. ತರುವಾಯ ಇಬ್ಬರೂ ಅವರವರ ಮನೆಗೆ ಹೋದರು.

ಆಗಸನು ತನ್ನ ಗುಡಿಸಲಿಗೆ ಹೋಗುತ್ತಲೇ, ಅವನ ಹೆಂಡತಿ ಎದ್ದು "ಈ ಅರ್ಧರಾತ್ರಿವೇಳೆಯಲ್ಲಿ ಊರೂರು ತಿರುಗಿಬಂದಿಯಾ?" ಎಂದು ಪಾರಾಯಣಮಾಡ ತೊಡಗಿದಳು.

ಆಗ ಅವನು—"ಸುಮ್ಮನಿರು. ಗಲಾಟೆ ಮಾಡಬೇಡ. ಇದು ನೋಡು. ನಾನೇನು



ಸುಮ್ಮನೆ ಹೋದೆ ನೆಂದುಕೊಂಡೆಯಾ?" ಎಂದು ಮುತ್ತಿನ ಹಾರವನ್ನು ತೆಗೆದು ಅವಳ ಕೊರಳಿನಲ್ಲಿ ಹಾಕಿದನು. ಅವಳು ಬ್ರಹ್ಮಾನಂದಪಡುತ್ತ "ಇದು ಎಲ್ಲಿಯದು, ಹೇಳಿ ತೀರಬೇಕು" ಎಂದು ಒಂದೇ ಹಟಹಿಡಿಯ ತೊಡಗಿದಳು.

"ಯಾರಿಗೂ ಹೇಳಬೇಡ ತಿಳಿಯಿತೆ?" ಎಂದಂದು ಅಗಸನು ಗುಟ್ಟನ್ನೆಲ್ಲಾ ಹೇಳಿಬಿಟ್ಟನು. ಅವಳು ಬೇರೆ ಯಾರೊಡನೆಯೂ ಹೇಳಲಿಲ್ಲ, ಆದರೆ ಕ್ಷೌರಿಕನ ಹೆಂಡತಿಯ ಹತ್ತಿರಮಾತ್ರ "ನೋಡಿದಿಯಾ ಈ ನನ್ನ ಹಾರ?" ಎಂದು ಗುಟ್ಟಿನಿಂದ ಹೇಳಿಬಿಟ್ಟಳು.

ಇನ್ನೇನಿದೆ? ಮರುಕ್ಷಣವೇ ಅದು ಕ್ಷೌರಿಕನಿಗೆ ತಿಳಿಯಿತು. ಅವನು ಹೋಗಿ ದೊಡ್ಡಯ್ಯನ ಕಿವಿಯಲ್ಲಿ ಊದಿಬಿಟ್ಟನು. ದೊಡ್ಡಯ್ಯನು ಕೆಲವುಮಂದಿ ಬಂಟರನ್ನು ಕರೆದುಕೊಂಡು ಬಂದು ಅಗಸನ ಮನೆಯನ್ನು ಶೋಧಿಸುವಾಗ, ಬಂಗಾರದ ನಾಣ್ಯಗಳೂ ಮುತ್ತಿನ ಹಾರಗಳೂ ದೊರಕಿದುವು.

ಆಗ ದೊಡ್ಡಯ್ಯನು ಅಗಸನನ್ನು ಗದರಿಸುತ್ತ—"ನೀನು ನಿಜವಾಗಿಯೂ ಆ ಪರದೇಶಿಯನ್ನು ಕೊಂದಿದ್ದಿ. ಇಲ್ಲದಿದ್ದರೆ ಇದೆಲ್ಲಾ ನಿನಗೆಲ್ಲಿಂದ?" ಎಂದನು.

ಅದಕ್ಕೆ ಅಗಸನು—"ಸ್ವಾಮಿ. ನಾನು ಯಾರನ್ನೂ ಕೊಂದಿಲ್ಲ. ಬೇಕಾದರೆ ಶಾಸ್ತ್ರಿಗಳನ್ನು ಕೇಳಿರಿ. ನನಗೇನೂ ಗೊತ್ತಿಲ್ಲ" ಎಂದನು ನಡುಗುತ್ತಾ.

ಕೂಡಲೇ ಬಂಟರು ಹೋಗಿ ಶಾಸ್ತ್ರಿಯನ್ನು ಕರೆದುಕೊಂಡು ಬಂದರು.

ಆ ಶಾಸ್ತ್ರಿ ಬಹಳ ಗಟ್ಟಿಗ. ದೊಡ್ಡಯ್ಯನನ್ನು ಕುರಿತು ಮೆಲ್ಲನೆ—"ಅಯ್ಯಾ ದೊಡ್ಡಯ್ಯನವರೆ, ಏಕೆ ಗಲಾಟೆ ಮಾಡುವಿರಿ?" ಈ ರಾತ್ರಿ ನಿಮ್ಮನ್ನು ಕರೆದೊಯ್ಯುತ್ತೇವೆ. ಬನ್ನಿ. ನಿಮಗೆ ಬೇಕಾದಷ್ಟು ಸಂಪತ್ತು ನೀವೂ ತೆಗೆದುಕೊಳ್ಳಬಹುದು" ಎಂದನು.

ದೊಡ್ಡಯ್ಯನು ಒಪ್ಪಿಕೊಂಡು, ಆ ರಾತ್ರಿ ಅವರಿಬ್ಬರೊಂದಿಗೆ ತಾನೂ ಹೊರಟನು. ಅವರೊಂದಿಗೆ ಕ್ಷೌರಿಕನೂ ಹೊರಟಿದ್ದ. ಆ ಸ್ಥಳವನ್ನು ತಲುಪುತ್ತಲೆ,ಅಗಸನು ಮಂತ್ರದ ದೀಪವನ್ನು ಹಚ್ಚಿ ಹಿಡಿದುಕೊಂಡನು. ಶಾಸ್ತ್ರಿ ಮಂತ್ರವನ್ನು ಓದ ತೊಡಗಿದನು. ಆಗ

ಬಾಗಿಲು ತೆರೆಯಲ್ಪಟ್ಟಿತು. ಒಳಗಡೆ ಯಕ್ಷನನ್ನು ಕಾಣುತ್ತಲೆ ದೊಡ್ಡಯ್ಯನೂ ಕ್ಷೌರಿಕನೂ ಹೆದರಿ ನಡುಗಿದರು. "ನೀವಿಬ್ಬರೂ ಹೋಗಿ ಬಾಚಿಕೊಂಡು ಬನ್ನಿ. ಯಾರೂ ಬಾರದಂತೆ ನಾವಿಲ್ಲಿ ಕಾವಲಿರುತ್ತೇವೆ" ಎಂದನು ದೊಡ್ಡಯ್ಯ.

ಪಳಗಿದವರಾದ ಅಗಸನೂ ಶಾಸ್ತ್ರಿಯೂ ಒಳಗೆ ಹೋಗಿ, ನಾಲ್ವರಿಗೂ ಸಾಲುವಷ್ಟು ನಾಣ್ಯಾದಿಗಳನ್ನು ಮೂಟೆ ಕಟ್ಟಿಕೊಂಡು ಬಂದರು.

ಆ ಸಮಯದಲ್ಲಿ ಹೊರಗಿದ್ದ ಕ್ಷೌರಿಕನು ದೊಡ್ಡಯ್ಯನನ್ನು ಕುರಿತು—"ಅವರ ಕೈಯಲ್ಲಿರುವ ತಾಳೆಯೋಲೆಯನ್ನು ನಾವೇ ಎಳೆದುಕೊಳ್ಳಬೇಕು" ಎಂದು ಸಲಹೆ ಮಾಡಿದನು.

"ಹೌದು. ಅದೇ ನನಗೂ ತೋರಿತು. ಆದೆಷ್ಟು ಹೊತ್ತು?" ಎಂದನು ದೊಡ್ಡಯ್ಯನು ಅಹಂಕಾರದಿಂದ.

ಇಷ್ಟರಲ್ಲಿ ಅಗಸನೂ ಶಾಸ್ತ್ರಿಯೂ ಹೊರಗೆ ಬಂದು—"ಇಗೊ ನಿಮ್ಮ ಪಾಲು" ಎನ್ನುತ್ತಾ ಅವರು ತಂದುದರಲ್ಲಿ, ಕೊಂಚಭಾಗವನ್ನು ಅವರಿಗೆ ಕೊಟ್ಟರು. ಆದರಲ್ಲಿ ಲಕ್ಷ್ಯವನ್ನೂ ಮಿಗಿಲಿಸುವಂತಹ ಬಂಗಾರ ಮುತ್ತು ರತ್ನಾದಿಗಳೆಲ್ಲವೂ ಇದ್ದುವು. "ಇಷ್ಟೇನಾ ಅಲ್ಲಿರುವುದು?" ಎಂದನು ದೊಡ್ಡಯ್ಯ.

"ಇಷ್ಟೇನು ಅಷ್ಟೇನು? ಇನ್ನೂ ಸಾವಿರ ಪಾಲು ಅಲ್ಲಿದೆ. ಅದೆಲ್ಲಾ ತರಲಿಕ್ಕೆ ಯಾರಿಂದಾದೀತು?" ಎಂದನು ಶಾಸ್ತ್ರಿ.

"ಆಗದೇನು? ನಾವು ತರುತ್ತೇವೆ. ಇರಿ" ಎಂದಂದು, ದೊಡ್ಡಯ್ಯನು, ಕ್ಷೌರಿಕನನ್ನು ಹಿಂದಿಟ್ಟುಕೊಂಡು ಗುಡ್ಡದೊಳಕ್ಕೆ ಹೊಕ್ಕನು.

ಅವರಿಬ್ಬರೂ ಕೆಳಗಿಳಿದರೋ ಇಲ್ಲವೋ ದೊಡ್ಡದೊಂದು ಗಾಳಿ ಬಂದು, ಕ್ಷೌರಿಕನ ಕೈಯಲ್ಲಿದ್ದ ಆ ದೀಪವು ಗಪ್ಪನೆ ನಂದಿ ಹೋಯಿತು. ತತ್‌ಕ್ಷಣವೇ ಗುಡ್ಡದ ಬಾಗಿಲು ಮುಚ್ಚಿಕೊಂಡು ಹೋಯಿತು.

ಶಾಸ್ತ್ರಿ ಆಶ್ಚರ್ಯದಿಂದ ಅಗಸನನ್ನು ಕುರಿತು—"ನೋಡಿದಿಯಾ, ಇವರು ಅತ್ಯಾಶೆಗೆ ಹೋಗಿ ಗುಡ್ಡಕ್ಕೆ ಆಹುತಿಯಾದರು. ಇನ್ನು ನಮಗೂ ಇಲ್ಲ, ಯಾರಿಗೂ ಇಲ್ಲ. ಇದು ಒಳ್ಳೇ ಪಾಠವಾಯಿತು ನಮಗೆ!" ಎಂದನು. ಬಳಿಕ ಇಬ್ಬರೂ ಅವರವರ ಮನೆಗೆ ಹೋದರು.



## ಯಾರೊ?

ಯಾರಯ್ಯಾ ನೀನು?
ನಿಮ್ಗುರ್ತಿಲ್ದ ಮನ್ಸಾ ಸಾಮಿ.
ಯಾವೂರಯ್ಯಾ ನಿಂದು?
ಎಲ್ಲಾ ನಂದೂರೇ ಸಾಮಿ.
ಎಲ್ಲ್ಯೋ ನೀನಿರೋದು?
ನಿಮ್ಮೆದುರೇ ಇದ್ದೇನಲ್ಲಾಮಿ.
ನಿನ್ ಹೆಸ್ರೇನೋ ಮೊಂಡಾ?
ನೀವ್ ಕರ್ದದ್ದೇ ನನ್ ಹೆಸ್ರು ಸಾಮಿ.
ನಿನ್ನಪ್ಪನ ಹೆಸ್ರೇನಯ್ಯಾ?
ಅವರಪ್ಪನಿ ಗ್ಗೊತ್ತು ಸಾಮಿ.
ನಿನ್ಮನೆ ಎಲ್ಲ್ಯೋ ಇರೋದು?
ಈ ನೆಲ್ದಮೇಲೇ ಉಂಟ್ಸಾಮಿ.
ಏನ್ಕೆಲ್ಸಾನೋ ನೀನ್ಮಾಡೋದು?
ಕುಲ್ ಕೆಲ್ಸಾ ಮಾಡ್ತೇನ್ಸಾಮಿ.
ನೀ ನ್ಯಾವ ಕುಲಾನಯ್ಯಾ?
ಗಂಡಸ್ಕುಲದೋನ್ಸಾಮಿ.
ಏನಯ್ಯಾ ಹಾಗ್ಬಗುಳೋದು?
ಅದು ನಾಯಿ ಸಾಮಿಾ ಬಗುಳೋದು.
ಸಾಕ್ ಮುಚ್ಚೋ! ನಿಂಗೇನ್ ಬೇಕೋ?
ಒಂದು ಕಾಸ್ ದಯಮಾಡ್ಸಾಮಿ!
ಇಕೋ, ಹೋಗ್ ದಯಮಾಡಯ್ಯ!
ನಿಂಪುಣ್ಯಾ! ನಮಸ್ಕಾರ್ ಸಾಮಿ!

—ಎಲ್. ನಾರಾಯಣ, ಬೆಂಗಳೂರು

## ಏಕೆ?

೧. ಸತ್ತದೇಹವು ನೀರಿನಲ್ಲಿ ತೇಲಾಡುವುದೇಕೆ?
೨. ಮೊಸಳೆ ಕಡಲಿನಲ್ಲಿ ವಾಸಿಸುವುದಿಲ್ಲವೇಕೆ?

—(ಉತ್ತರ: 58 ನೇ ಪುಟ)

## "ಸ"ಕಾರದ "ಸರ"

**ಸ**ಕ್ಕರೆ ಪಟ್ಟಣದ ಸರೋಜಳು, ಸಂಗಾತಿ ಸರಸ್ವತಿಯೊಡನೆ, ಸಂಜೆ ಹೊತ್ತಿನಲ್ಲಿ, ಸರೋವರದ ಸಮಿಾಪದಲ್ಲಿ ಸಂಚಾರ ಹೊರಟಾಗ, ಸರೋಜಳ "ಸರ" ಸರಕ್ಕನೆ ಸರೋವರದಲ್ಲಿ ಬಿದ್ದಿತು.

## "ಪ"ಕಾರದ "ಪಂಚಾಯ್ತಿ"

**ಪಂ**ಡರಾಪುರದ ಪಂಚಾಕ್ಷರೀ, ಪದ್ಮನಾಭ ಭಟ್ಟರು, ಪಂಚಮಿದಿನ, ಪಂಚೆ ಉಟ್ಕೊಂಡು ಪಂಚಾಂಗ ಹಿಡಿದುಕೊಂಡು, ಪಕ್ಕದ ಮನೆಯ ಪರಮೇಶ್ವರಭಟ್ಟರೊಡನೆ ಪರಮಾನಂದದಿಂದ, ಪಂಚಾಯ್ತಿ ಹೊಡೆಯುತ್ತಾ, ಫಣಿಭಟ್ಟರಮಗ ಪುಟ್ಟಭಟ್ಟರ ಪಂಕಜಮ್ಮನ ಮದುವೆಗೆ ಪುರೋಹಿತ ಪುರಾಣಿಕರಾದರು.

## "ರಾ"ಕಾರದ "ರಾಮಾಯಣ"

**ರಾಂ**ಪುರದ ರಾಮಾಶಾಸ್ತ್ರಿಗಳು, "ರಾಮನವಮಿ"ದಿನ ರಾಮನಗರದ ರಾಮರಾಯರ, ರಾಮಮಂದಿರದಲ್ಲಿ, ರಾತ್ರೀಹಗಲೂ, ರಾಮ ಪಾರಾಯಣವನ್ನೂ, ರಾಮಾಯಣ ಕಥೆಯನ್ನೂ, ರಾಮ ಮಹಿಮೆಯನ್ನೂ, ರಾಗರಸವತ್ತಾಗಿ, ರೂಪಿಸಿ (ಹೇಳಿ)ದರು.

–ಅಂದಗಾರು, ಸಾಂಬಶಿವನ್, ಕೊಪ್ಪ

## ಮಧುರಾ

'ಮಧುರಾ'ವನ್ನು ತಿರುವಿಹಾಕು,
ಮಧ್ಯ ಬಿಟ್ಟು ಓದು ಸಾಕು,
ಯಾವ ಮನುಷ್ಯನಿಗೆ ಈ
ಪುಣ್ಯನಾಮ ಹಿಡಿಸದೋ
ಅವನು ಬೇಕಾದರೆ ಆ
ಮಧ್ಯಾಕ್ಷರ ಪಡೆಯಲಿ!

ಶಂಕರದೇಸಾಯಿ, ಮುನಿರಾಬಾದ

# ಆಗುವುದೋ ನೋಡು

(1) ಈ ಕೆಳಗೆ ಆರು ಗ್ಲಾಸುಗಳೂ ಅವುಗಳ ಕೆಳಗೆ ಸಂಖ್ಯೆಗಳೂ ಇವೆ. ೨-೪-೬ ನೇ ಗಾಸುಗಳಲ್ಲಿ ಅರ್ಧದವರೆಗೆ ಪಾನಿಯವಿದೆ. ಇವುಗಳಲ್ಲಿ ಒಂದು ಗ್ಲಾಸನ್ನು ಮಾತ್ರ ಕದಲಿಸಿ, ಖಾಲೀ

1 2 3 4 5 6

ಗ್ಲಾಸುಗಳು ಮೂರೂ, ಪಾನೀಯದ ಗ್ಲಾಸುಗಳು ಮೂರೂ ಒಂದೊಂದು ವಿಭಾಗವಾಗುವಂತೆ ಬೇರ್ಪಡಿಸ ಬಲ್ಲೆಯಾ?

(2) ಒಂದು ಸಕ್ಕರೆಯ ಗಟ್ಟಿಯನ್ನು ನಿನಗೆ ಕೊಟ್ಟರೆ, ಅದಕ್ಕೆ ಬೆಂಕಿ ಹಚ್ಚಿ ದೀಪ ಬೆಳಗಿಸಬಲ್ಲೆಯಾ?

(3) ಒಂದು ಕರ್ಚೀಪನ್ನು ತೆಗೆದುಕೋ. ಅದರ ಎರಡು ಮೂಲೆ ಮೊನೆಗಳನ್ನೂ ಹಿಡಿದು ಕೈಗಳನ್ನು ಕಟ್ಟಿಕೊ. ಹಿಡಿಕೆ ಬಿಡದೆಯೇ ಕರ್ಚೀಪಿನಲ್ಲೊಂದು ಗಂಟು ಹಾಕಬಲ್ಲೆಯಾ?

[ತಿರುಗಿಸಿ ನೋಡು]

---

(1) 2ನೇ ಗ್ಲಾಸು ತೆಗೆದು ಅದರಲ್ಲಿದ್ದುದನ್ನು 5ನೇ ಗ್ಲಾಸಿಗೆ ಸುರಿ. ಆ ಖಾಲೀ ಗ್ಲಾಸನ್ನು ಎಲ್ಲಿತ್ತೋ ಅಲ್ಲೇ ಇಟ್ಟು ಈಗ ನೋಡು.

(2) ಸಿಗರೇಟಿನ ಬೂದಿಯನ್ನು ಸಕ್ಕರೆ ಗಟ್ಟಿಯ ಕೊನೆಗೆ ಚೆನ್ನಾಗಿ ಅಂಟಿಸು. ಬಳಿಕ ಬೆಂಕಿ ಕಡ್ಡಿಯನ್ನು ಗೀಚಿ ಅದಕ್ಕೆ ತಾಗಿಸು. ಆ ಕೊನೆ ಹತ್ತಿಕೊಂಡು, ಬಳಿಕ ದೀಪದಂತೆಯೇ ಬೆಳಗುತ್ತದೆ.

(3) ಕೈಕಟ್ಟಿಕೊಂಡು ಎಡಗೈ ಬಲಗೈಗಳ ಬೆರಳಿಂದ ಕರ್ಚೀಪಿನ ಕೊನೆಯನ್ನು ಹಿಡಿದಿರುವಿಯಷ್ಟೆ? ಕರ್ಚೀಪನ್ನು ಬಿಡದೆ, ಕೈಗಳನ್ನು ಮಾತ್ರ ಬಿಡಿಸಿಕೊಂಡು ಕೆಳಗಿಳಿಸು. ಈಗ ಕರ್ಚೀಪಿನಲ್ಲಿ ಒಂದು ವಿಚಿತ್ರವಾದ ಗಂಟು ಏರ್ಪಡುತ್ತದೆ.




ಹೆಸರೇನೆಂದರೆ ಹೇಳಬಾರದ ಒಂದೂರು. ಯಾಕೆಂದರೆ ಅದೊಂದು ಭಯಂಕರ ಊರು. ಅಲ್ಲಿದ್ದಳು 'ಕಂಕಾಳೀ' ಎಂಬೊಬ್ಬಳು ದೊಡ್ಡ ಮುದುಕಿ, ಮಂತ್ರವಾದಿನಿ.

ಅವಳ ಮಂತ್ರ ಅಂದರೆ, ಸಾಮಾನ್ಯವಲ್ಲ; ನಾಯಿಯನ್ನು ಟಗರು ಮಾಡ್ತಾಳೆ, ಮನುಷ್ಯರನ್ನು ಮಂಗ ಮಾಡ್ತಾಳೆ, ಹಾಗೆ ಮಾಡಿಬಿಟ್ಟುಬಿಡುತ್ತಾಳೆಯೆ? ಇಲ್ಲ ಇಲ್ಲ! ಹಾಗೆ ಮಾರ್ಪಡಿಸಿದ ನಾಯಿ-ಮಂಗಗಳನ್ನು ಒಟ್ಟು ಬೇಯಿಸಿ ತಿಂದುಬಿಡುತ್ತಾಳೆ-ಅಂತ ಇನ್ನೂ ಎಷ್ಟೋ ವಿಧವಾಗಿ ಅವಳ ಕತೆ ಎಲ್ಲರೂ ಹೇಳುತ್ತಿದ್ದರು.

ಈ ಸಂಗತಿ ಒಬ್ಬ ದೊಡ್ಡ ರಾಕ್ಷಸ ಕೇಳಿಬಿಟ್ಟ. 'ಇಂಥಾ ತೀನೀ ತಿನ್ನುವ ಕಂಕಾಳೀ ರಕ್ತ ಎಷ್ಟು ರುಚಿಯೋ' ಎಂದು ಅವನ ಬಾಯಲ್ಲಿ ನೀರೂರಿ ಬಂತು. ಹೇಗಾದರೂ ಮಾಡಿ ಆ ರಾಕ್ಷಸಿಯನ್ನೇ ತಿಂದುಬಿಡಬೇಕೆಂದು ಯೋಚನೆ ಮಾಡಿದ. ಅವನೂ ಮಾಯಾವಿ. ಕೂಡಲೇ ಅವನೊಬ್ಬ ಸುಂದರ ರಾಜಕುಮಾರನ ವೇಷದಲ್ಲಿ ಕಂಕಾಳೀ ಮನೆಗೆ ಬಂದು-"ಓ, ಮುದ್ದಿನ ಮೂಟೇ, ಕಂಕಾಳೀ! ನಿನ್ನ ಚೆಂದಾನ ನೋಡಿ ಬಂದೆ ನಾನು. ನನ್ನ ಮದುವೆ ಮಾಡಿಕೊಳ್ತ್ಯಾ?" ಎಂದ.

ಕಂಕಾಳೀ ತನ್ನ ಬೊಚ್ಚು ಬಾಯನ್ನು ತೆರೆದು ನಗುತ್ತಾ—"ಮಾಡಿಕೊಂಡರೆ ನನ್ನ ನಿನ್ನೂರಿಗೆ ಹೊತ್ತುಕೊಂಡು ಹೋಗುತ್ತ್ಯಾ?" ಎಂದು ಕೇಳಿದಳು.

"ಓ! ನನ್ನ ಹೆಗಲಲ್ಲಿ ಮಲಗಿಕೊ! ಒಂದೇ ನಿಮಿಷದಲ್ಲಿ ಕೊಂಡೊಯ್ದುಬಿಡ್ತೇನೆ" ಎಂದ ರಾಕ್ಷಸ.

"ಸರೀ" ಎಂದು ಕಂಕಾಳೀ ರಾಕ್ಷಸನ ಹೆಗಲಲ್ಲಿ ಬಿದ್ದಳು. ರಾಕ್ಷಸ ಮೂರಡಿ ನಡೆದ. ಮತ್ತೆ ಭೂಮಿಯನ್ನೊಂದು ಒದ್ದ. ಭಡಾಲ್ಲಂತ ಭೂಮಿ ಭಾಗಾಗಿ ಪಾತಾಳಕ್ಕೆ ದಾರಿಯಾಯ್ತು ಅಲ್ಲಿ ಇಳಿದ. ಆಗ ರಾಕ್ಷಸನ ಗುಟ್ಟು ಮಂತ್ರವಾದೀ ಮುದುಕಿಗೆ ಗೊತ್ತಾಯಿತು. ಅವನ ಕುತ್ತಿಗೆಯನ್ನು ಬಲವಾಗಿ ಹಿಡಿದುಕೊಂಡಳು.

ಸಿ. ರಾಮಕೃಷ್ಣ - ಬಳ್ಳಾರಿ



ಪಾತಾಳಕ್ಕೆ ಹೋದ ಮೇಲೆ ಕಂಕಾಳೀನ ಕೆಳಗಿಳಿಸಬೇಕೆಂದು ಎಷ್ಟು ಪ್ರಯತ್ನ ಪಟ್ಟರೂ ಆ ರಾಕ್ಷಸನಿಗೆ ಸಾಧ್ಯವಾಗಲಿಲ್ಲ. ಆ ಮುದುಕಿ ಅವನ ಹೆಗಲಿಗೆ ಬಲವಾಗಿ ಅಂಟಕೊಂಡಿದ್ದಳು. ಅವಳ ಮಾಂಸ ತಿನ್ನುವ ವಿಚಾರವಂತೂ ಇರಲಿ, ಈ ಪಿಶಾಚಿಯು ಬಿಟ್ಟು ಹೋದರೆ ಸಾಕೆಂದಾಯಿತು ರಾಕ್ಷಸನಿಗೆ!

ಅವನು ಆ ಮುದುಕಿಯ ಹೊರೆಯನ್ನು ಹೊತ್ತುಕೊಂಡೇ ನಡೆದನು. ತನ್ನ ಗೆಳೆಯನಾದ ಬ್ರಹ್ಮರಾಕ್ಷಸನೊಡನೆ ಮೊರೆಯಿಟ್ಟುಕೊಂಡ-

ಬ್ರಹ್ಮರಾಕ್ಷಸ—"ಅರೇ, ಹುಚ್ಚಾ! ಎಲ್ಲಿಂದ ತಂದೆಯೋ ಈ ಹೊರೆ! ಅಲ್ಲೇ ಬಿಟ್ಟು ಬಾ ಹೋಗು" ಅಂದ.

ರಾಕ್ಷಸ ಹಿಂದಿರುಗಿ ಬರುತ್ತಾ ಇದ್ದ. ಆಗ ದಾರಿಯಲ್ಲಿ ಒಬ್ಬ ಗೊಲ್ಲ ಬಂಟ ಅವನನ್ನು ನೋಡಿ ನಗುತ್ತಾ—"ಭಲೇ! ಈ ಕತ್ತೇ ಒಜ್ಜೇನ ಎಷ್ಟು ದಿನದಿಂದ ಹೊರುತ್ತಿದ್ದೀಯೋ!" ಎಂದ.

'ಇವನಾರೋ ದೇವತೆಯೋ! ನನ್ನ ವಿಷಯ ಇವನಿಗೆ ಹೇಗೆ ಗೊತ್ತಾಯಿತು?' ಎಂದು ರಾಕ್ಷಸ ಆಶ್ಚರ್ಯಪಟ್ಟು, ತನ್ನ ಸಂಕಟವನ್ನು ಅವನೊಂದಿಗೆ ಹೇಳಿಕೊಂಡ.

"ಓಸ್, ಇಷ್ಟೇನಾ? ನಿನ್ನ ಹೊರೇನ ನನ್ನ ಹೆಗಲಿಗೆ ಹಾಕು" ಎಂದ ಆ ಗೊಲ್ಲಬಂಟ.

ಬಳಿಕ ಗೊಲ್ಲಬಂಟ ಮುದುಕಿಯ ಕಿವಿಯಲ್ಲಿ "ಈ ರಾಕ್ಷಸನಿಗೆ ನಾನು ತಕ್ಕ ಬುದ್ಧಿ




ಕಲಿಸ್ತೇನೆ. ನೀನು ನನ್ನ ಹೆಗಲಿಗೆ ಬಾ" ಎಂದ. ಮುದುಕಿ ಒಪ್ಪಿದಳು. ಅವನು ಏನು ಮಂತ್ರ ಹೇಳಿದ್ದೋ ರಾಕ್ಷಸನಿಗೆ ಗೊತ್ತಾಗಿಲ್ಲ.

ರಾಕ್ಷಸನು ತನ್ನ ಹೆಗಲಿನ ಮುದಿ ಕಂಕಾಳೀ ಹೊರೆಯನ್ನು ಗೊಲ್ಲನ ಹೆಗಲಿಗೆ ಹಾಕಿದ. ಗೊಲ್ಲನು ಆ ಹೊರೆಯೊಂದಿಗೆ ಪುಟಚೆಂಡಿನಂತೆ ಓಡಿದ.

ರಾಕ್ಷಸನು ಆಶ್ಚರ್ಯದಿಂದ ನೋಡುತ್ತಾ "ಈ ಹುಚ್ಚ ಗೊಲ್ಲ ಇನ್ನು ತಿರುಗಿ ಬರುವುದುಂಟೆ?" ಎಂದುಕೊಂಡು ನಕ್ಕ. ಬಳಿಕ ಅವನ ಕುರಿ ಮಂದೆಗಳನ್ನು ಹೊಡೆದುಕೊಂಡು ಹೋಗಲು ನೋಡಿದ. ಕುರಿಗಳನ್ನಾದರೂ ತಿಂದು ಹೊಟ್ಟೆ ತುಂಬಿಸೋಣವೆಂದು.

ಆಗ ಆ ಗೊಲ್ಲಬಂಟ ಅವನಿದಿರು ಬಂದು ನಿಂತು—"ಏನೋ ಇದು! ಆ ಮುದಿ ಕಂಕಾ



ಳೀನ ನನಗೆ ಕೊಟ್ಟು, ನನ್ನ ಕುರಿಗಳನ್ನು ಕದ್ದುಕೊಳ್ತ್ಯಾ! ಭಲೇ" ಎಂದು ನಕ್ಕ.

"ಅರರೇ ಗೆಳೆಯಾ, ನನಗೆ ಉಪಕಾರ ಮಾಡಿದ ನಿನ್ನಕುರಿಗಳನ್ನು ಕದ್ದುಕೊಂಡೇನೆ? ಅವುಗಳನ್ನು ಒಟ್ಟುಮಾಡಿ ಕಾಯುತ್ತಿದ್ದೇನೆ. ಅಲ್ಲಾ, ನೀನು ಆ ಪಿಶಾಚೀನ ಹೇಗೆ ಬಿಡಿಸಿ ಕೊಂಡ್ಯೋ?" ಎಂದು ರಾಕ್ಷಸ ಆಶ್ಚರ್ಯದಿಂದ ಕೇಳಿದ.

"ಅದಕ್ಕೇನು? ಓ ಅಲ್ಲಿ ದಿಕ್ಕಿಲ್ಲದವರು ಬಿದ್ದು ಸಾಯುವ ಹಾಳು ಗುಂಡಿಯುಂಟು. ಅದರಲ್ಲಿ ಹಾಕಿ ಬಂದೆ. ಆಗ ನನ್ನ ಗೊಂಗಡಿ ಕಂಬಳೀನ ಅದು ಗಟ್ಟಿಯಾಗಿ ಹಿಡಿದು ಕೊಂಡಿತು. ಹೋದರೆ ಹೋಗಲೀಂತ ಆ ಕಂಬಳಿಯೊಂದಿಗೇ ಹಾಕಿ ಬಂದೆ" ಎಂದನು ಗೊಲ್ಲಬಂಟ.

"ಹಾಗಾದರೆ, ಬಂಟಾ, ನಾ ನಿನಗೊಂದು ಉಪಕಾರ ಮಾಡ್ತೇನೆ. ನಾನು ಈ ದೇಶದ ರಾಜನ ಮಗಳನ್ನು ಹಿಡೀತೆನೆ. ಅವಳಿಗೆ ಮಾತೂ, ಮತೀ, ಊಟಾ, ನೋಟ ಎಲ್ಲಾ ಬಿದ್ದುಹೋಗುತ್ತೆ. ಸರಿಯಾಗಿ ಇವತ್ತಿಗೆ ಮೂವತ್ತೊಂದನೇ ದಿನ ನೀನು ಬಂದು, ಅವಳ ಕಿವೀ ಹತ್ತಿರ 'ನಾನು ಗೊಲ್ಲಬಂಟ' ಅನ್ನು. ಕೂಡಲೆ ನಾನು ಅವಳನ್ನು ಬಿಟ್ಟು ಹೋಗ್ತೇನೆ ವ.ತ್ತೆ ನೋಡು ನಿನಗೆ ಹೊಡೆಯೋ ಅದೃಷ್ಟಾನ!" ಎಂದನು ರಾಕ್ಷಸ.

ಗೊಲ್ಲನು "ನಿನ್ನಉಪಕಾರ ನೋಡ ಬೇಕಂತಲೇ ನಿನಗೆ ಉಪಕಾರಮಾಡಿದೆ" ಎಂದು ಹೊರಟು ಹೋದ. ಅವನು ಪಟ್ಟಣವನ್ನು ಮುಟ್ಟಿದಾಗ, ಎಲ್ಲಿನೋಡಿದರೂ ಒಂದೇ ಮಾತು! "ರಾಜಕುಮಾರಿಗೆ ಏನೋ ಆಯಿತು! ಮಾತಿಲ್ಲ ಕತೆಯಿಲ್ಲ! ಊಟವಿಲ್ಲ ಆಟವಿಲ್ಲ!...." ಎಂದು ಎಲ್ಲರೂ ಹೇಳಿಕೊಳ್ಳುತ್ತಿದ್ದರು.

"ರಾಜಕುಮಾರಿಯನ್ನು ಗುಣಪಡಿಸಿದವರಿಗೆ ಅರ್ಧರಾಜ್ಯವನ್ನುಕೂಟ್ಟು ರಾಜಕುಮಾರಿಯನ್ನೂ ಕೊಟ್ಟು ಮದುವೆ ಮಾಡ್ತಾರೇ!" ಎಂದು ರಾಜನು ಡಂಗುರ ಸಾರಿಸಿದ್ದೂ ಕೇಳಿತು. ಎಲ್ಲೆಲ್ಲಿಯೂ ರಾಜಕುಮಾರಿಗೆ ವೈದ್ಯಮಾಡುವ ಮಾತೇ ಮಾತು.

ಒಂದು ತಿಂಗಳಾಯಿತು. ಗೊಲ್ಲ ಬಂಟನು ಅರಮನೆಗೆ ಹೊರಟ. ಕೋಟೆಯ ಬದಿಗೆ ಬರುವಾಗ ಎಷ್ಟೋಮಂದಿ ವೈದ್ಯರೂ, ಮಂತ್ರವಾದಿಗಳೂ, ತಂತ್ರಶಾಲಿಗಳೂ ಮುಖ

ಬಾಡಿಸಿಕೊಂಡು ಹೊರಗೆ ಬರುತ್ತಿದ್ದರು. ಅವರಾರಿಂದಲೂ ರಾಜಕುಮಾರಿಯನ್ನು ಗುಣಪಡಿಸಲು ಸಾಧ್ಯವಾಗಲಿಲ್ಲ.

ಗೊಲ್ಲನ ವೇಷವನ್ನು ನೋಡಿ ಕಾವಲುಗಾರರು ಅವನನ್ನು ತಡೆದರು. ರಾಜಕುಮಾರೀನ ತಾನು ಸರಿಮಾಡುವೆನೆಂದು ಅವನು ಹೇಳಿದ್ದು ಕೇಳಿ ಆಶ್ಚರ್ಯದಿಂದ ಮತ್ತೆ ಒಳಗೆ ಬಿಟ್ಟರು.

ಒಳಗೆ ಹೋದ ಗೊಲ್ಲ ಬಂಟ. ಮಂತ್ರಾ ತಂತ್ರಾ, ಅಟ್ಟಹಾಸ ಎಲ್ಲಾ ಮಾಡಿದ. ಬೇಕಾದ ಸಾಮಾನುಗಳೆಲ್ಲಾ ತರಿಸಿದ. ತನ್ನ ಸುತ್ತೂ ಹರವಿಕೊಂಡ. 'ಹ್ರಾಂ ಹ್ರೀಂ' ಎಂದು ಮಂತ್ರ ಹೇಳಿದ. ಕಡೆಗೆ ರಾಜಕುಮಾರಿಯ ಕಿವಿಯಲ್ಲಿ ರಾಕ್ಷಸನು ಹೇಳಿಕೊಟ್ಟ ತಿರುಮಂತ್ರವನ್ನು ಉಚ್ಚರಿಸಿದ.

ಕೂಡಲೇ ರಾಕ್ಷಸನು ಅವಳನ್ನು ಬಿಟ್ಟು ಹೋಗುತ್ತಾ "ಎಲೋ! ಜಾಗ್ರತೆ! ಇನ್ನೆಲ್ಲಾದರೂ ಇಂಥಾ ವೈದ್ಯ ಮಾಡ ಬೇಡ! ನಿನ್ನ ತಲೆ ನೂರು ಹೋಳಾದೀತು!" ಎಂದು ಗದರಿಸಿ ಹೊರಟುಹೋದ.

ರಾಜಕುಮಾರಿ ಎಂದಿನಂತೆ ಸರಿಯಾದಳು. ಕೋಟೆಯೊಳಗೆ ಮಂಗಳ ವಾದ್ಯಗಳು ಮೊಳಗಿದುವು. ರಾಜಕುಮಾರಿಯೊಂದಿಗೆ ಗೊಲ್ಲ ಬಂಟನ ಮದುವೆಯಾಯಿತು. ಅವನು ರಾಜನೂ ಆದ. ಆದರೆ ಕತೆ ಇಲ್ಲಿಗೇ ಮುಗೀಲಿಲ್ಲ. ಇನ್ನೂ ಇದೆ.

ಆ ರಾಕ್ಷಸನು ಸುಮ್ಮನೆ ಕುಳಿತರೆ ತಾನೇ? ಹೋಗಿ ಪಕ್ಕದ ದೇಶದ ಅರಸನ ಮಗಳನ್ನು




ಹಿಡಿದುಕೊಂಡ. ಮತ್ತೇನು? ಅವಳಿಗೂ ಭೂತ ಬಾಧೆ ಬಡಿದ ಹಾಗಾಯಿತು. ಆ ರಾಜ ಎಷ್ಟೋ ಮದ್ದು ಮಂತ್ರಗಳನ್ನು ಮಾಡಿಸಿದ. ಏನೂ ಪ್ರಯೋಜನವಾಗಲಿಲ್ಲ, ನಮ್ಮ ಗೊಲ್ಲಬಂಟನ ಸುದ್ದಿ ಕೇಳಿ ಅವನಿಗೆ ವಾರ್ತೆ ಕಳಿಸಿದ ಆ ರಾಜ.

ಇದನ್ನು ಕೇಳುತ್ತಲೇ ಗೊಲ್ಲ ಬಂಟನಿಗೆ ಭಯವಾಯಿತು. ರಾಕ್ಷಸನು ಹೇಳಿದ ಕಟ್ಟಕಡೇ ಮಾತು ಅವನ ನೆನಪಿಗೆ ಬಂತು. ಆದರಿಂದ ಅತನು–"ಅಯ್ಯಾ, ನಾನು ಮಾಂತ್ರಿಕನಲ್ಲ, ತಾಂತ್ರಿಕನಲ್ಲ, ವೈದ್ಯನಲ್ಲ; ಒಂದು ವರದಿಂದ ಈ ರಾಜಕುಮಾರಿಯನ್ನು ಮಾತ್ರ ಗುಣ ಮಾಡಲು ಶಕ್ತನಾದೆ, ಅಷ್ಟೇ" ಎಂದು ಆ ರಾಜನಿಗೆ ಪ್ರತ್ಯುತ್ತರವನ್ನು ಹೇಳಿ ಕಳುಹಿಸಿದನು.

ಅದಕ್ಕೆ ಆ ರಾಜ, "ನನ್ನ ಮಗಳ ರೋಗ ಗುಣ ಮಾಡಲು ನಿನ್ನಿಂದಾಗದಿದ್ದರೆ, ನಮ್ಮೊಂದಿಗೆ ಯುದ್ಧಕ್ಕೆ ಸಿದ್ಧನಾಗು' ಎಂದು ಖಂಡಿತ ಸುದ್ದಿ ಕಳಿಸಿದ. ಇನ್ನೇನು ಮಾಡುವುದು? ಧೈರ್ಯವೇಗತಿ!

"ಸರಿನೋಡೋಣ" ಎಂದುಕೊಂಡು ಗೊಲ್ಲ ರಾಜ ಆ ದೇಶಕ್ಕೆ ಹೋದ. ಕೋಟೆಯೊಳಗೆ ಹೋಗಿ ಆ ರಾಜಕುಮಾರಿಯ ಬಳಿಯಲ್ಲಿ ಕುಳಿತು. ಸ್ವಲ್ಪ ಹೊತ್ತು ದೊಡ್ಡ ಮಂತ್ರಗಾರನಂತೆ ನಟನೆ ಮಾಡಿದ. ಏನೋ ಮಂತ್ರೋಚ್ಚಾರಣೆ ಮಾಡಿದ.

ಬಳಿಕ ಅವಳ ಕಿವಿಯ ಬಳಿಯಲ್ಲಿ, "ಎಲೋ, ನನಗೆ ಉಪಕಾರ ಮಾಡಿದವನೇ, ನಾನೇನೂ ಇಲ್ಲಿಗೆ ಬರಬೇಕೆಂದಿರಲಿಲ್ಲ. ಬೇರೆ ಉಪಾಯವಿಲ್ಲದೆ ಬಂದೆ. ಅವೊತ್ತು ನಾನು ಹಾಳು ಗುಂಡಿಯಲ್ಲಿ ಹಾಕಿದ ಕಂಕಾಳೀ ಮುದುಕಿ, ಸತ್ತೇಹೋದಳೂಂತ ಮಾಡಿದ್ದೆ. ಅವಳೀಗ ಎದ್ದು ಬಂದಿದ್ದಾಳೆ. ನಿನ್ನ ಸುಳಿವೂ ಅವಳಿಗೆ ತಿಳಿದಿದೆ. ನಿನ್ನನ್ನು ಹುಡುಕುತ್ತಾ ಬಂದಿದ್ದಾಳೆ. ಕೋಟೆಯ ಮೇರೆಯವರೆಗೂ ಬಂದಾಯಿತು. ನೀನು ನನಗೆ ಉಪಕಾರ ಮಾಡಿದ್ದೀಯಲ್ಲಾ ಅಂತ, ಇದನ್ನು ನಿನಗೆ ಹೇಳಲಿಕ್ಕಾಗಿ ಓಡೋಡಿ ಬಂದೆ. ಆದ್ದರಿಂದ ನೀನು...."

ಗೊಲ್ಲರಾಜನು ಮಾತು ಮುಗಿಸುವ ಮೊದಲೇ, 'ಕಂಕಾಳೀ' ಎಂಬ ಮಾತು ಕಿವಿಗೆ ಬಿದ್ದಕೂಡಲೇ, ಆ ರಾಕ್ಷಸನು "ಅಯ್ಯೋಮ್ಮೊ" ಎಂದೊಂದು ಕೇಕೇ ಹಾಕಿ ರಾಜಕುಮಾರಿಯನ್ನು ಬಿಟ್ಟು ಓಡಿಹೋದ! ಹೋದವ ನೇರಾಗಿ ಪಾತಾಳಕ್ಕೇ ಹೊಕ್ಕು ಅಡಗಿಕೊಂಡ!!

ಇನ್ನೇನಿದೆ? ಆ ರಾಜಕುಮಾರಿಯೂ ಗುಣವಾದಳು. ಅವಳು ಗೊಲ್ಲರಾಜನನ್ನು ನೋಡಿ ನಕ್ಕಳು. ಆ ರಾಜನಿಗೆ ಸಂತೋಷವಾಯಿತು. ಬಳಿಕ ಮಗಳ ಕೋರಿಕೆಯಂತೆ, ಆ ರಾಜ ಅವಳನ್ನು ಕೂಡಾ ಅವನಿಗೇ ಮದುವೆ ಮಾಡಿಕೊಟ್ಟನು.

ಅದೃಷ್ಟವಂತನಾದ ಗೊಲ್ಲಬಂಟ ಗೊಲ್ಲರಾಜನಾಗಿ, ಇಬ್ಬರು ರಾಣಿಯರೊಂದಿಗೆ ರಾರಾಜಿಸಿದ!



## ಬಾವಲಿಯೂ ಕತ್ತಲೆಯೂ

**ಬಾ**ವಲಿ, (ಗಬ್ಬಿಲ) ಸುಮಾರು 60,000,000 ವರ್ಷಗಳಿಂದ ರಾತ್ರಿಯಲ್ಲಿ ಸಂಚರಿಸುತ್ತ ದೆಂದು ವಿಜ್ಞಾನಿಗಳು ಕಂಡುಹಿಡಿದಿದ್ದಾರೆ. ಹೇಗೆ ಗೊತ್ತೆ?

'ರಾಡಾರ್' ಎಂಬ ಯಂತ್ರವು, ರೇಡಿಯೋ ತರಂಗಗಳ ದ್ವಾರಾ ಬರುವ ಹೋಗುವ ವಿಮಾನಗಳನ್ನು ಗೊತ್ತು ಹಚ್ಚುತ್ತವೆ. ಈ ತರಂಗಗಳು ನೇರಾಗಿ ಹೋಗುತ್ತಿರುತ್ತವೆ. ಆದರೆ ದಾರಿಯಲ್ಲಿ ಏನಾದರೊಂದು ವಸ್ತು ತಗಲಿದರೆ ಕೂಡಲೇ ಹಿಂದಿರುಗಿ ಬರುತ್ತವೆ. ಆಗ ಬರುವ ಪ್ರತಿಧ್ವನಿಯಿಂದ, ಆ ವಸ್ತು ಏನೋ ಅದು ಹೇಳಬಲ್ಲುದು.

ಹಾಗೆಯೇ ಬಾವಲಿ, ಸೂಕ್ಷ್ಮಸ್ವರದ ಶಬ್ದ ತರಂಗಗಳನ್ನು ಒಂದೇ ಸವನೆ ಬಿಡುತ್ತಿರುತ್ತದೆ. ಇವುಗಳಿಗೆ 'ರಾಡಾರ್ ಸಿಗ್ನಲ್' ಅನ್ನುವರು. ಇವು ಬಾವಲಿ ಸಂಚರಿಸುವ ಪ್ರದೇಶವನ್ನೆಲ್ಲಾ ತುಂಬಿಸಿಬಿಡುತ್ತವೆ. ಮಧ್ಯದಲ್ಲಿ ಅವುಗಳಿಗೆ ಎಷ್ಟು ಸಣ್ಣವಸ್ತು ತಗಲಿದರೂ, ಎಚ್ಚರಿಕೆಯ ಸಿಗ್ನಲ್ಸು ತಿರುಗಿ ಬರುತ್ತವೆ. ಆಗ ಅದು ತನ್ನ ಪ್ರಯಾಣದ ದಿಕ್ಕನ್ನು ಗಕ್ಕನೆ ವ್ಯಾರಿಸಿ ಕೊಳ್ಳುತ್ತದೆ. ಕಣ್ಣನ್ನು ಬಿಗಿದರೂ ಅವು ಮಾಮೂಲಿನಂತೆ ಹಾರಬಲ್ಲವು. ಕಿವಿಯನ್ನೂ ಬಾಯಿ ಯನ್ನೂ ಮುಚ್ಚಿಬಿಟ್ಟರೆ ಅವುಹಾರಲಾರವು.

ಅವು ಹಾರುವ ಮೊದಲು ಸೆಕೆಂಡಿಗೆ ಹತ್ತರಂತೆ ರಾಡಾರ್ ಸಿಗ್ನಲ್ಸಿನಂತಹ ಶಬ್ದ ಬಿಡಲು ತೊಡಗುವುದಂತೆ. ಹಾರಲು ತೊಡಗುತ್ತಲೇ ಇವು ಸೆಕೆಂಡಿಗೆ ೩೦ ರಂತೆ ಹೆಚ್ಚುವುದಂತೆ. ಎಚ್ಚ ರಿಕೆಯ ಪ್ರತಿಧ್ವನಿ ತಿರುಗಿಬಂದಾಗ ಸೆಕೆಂಡಿಗೆ ೫೦ರಂತೆ ಬಿಡಲ್ಪಡುತ್ತವೆ. ಇವುಗಳ ಪ್ರತಿಧ್ವನಿ ಕೂಡಾ ಅಷ್ಟೇ ಪ್ರಬಲವಾಗಿದ್ದು, ದಾರಿಯಲ್ಲಿರುವುದೇನೋ ಬಾವಲಿಗೆ ತಿಳಿದುಹೋಗುತ್ತದೆ.

## ಇದೇ ದೃಷ್ಟಾಂತ

**ಅ**ಕಬರ ಬಾದಷಹನು ಒಮ್ಮೆ ಆಸ್ಥಾನದ ಕವಿಗಳಿಗೂ, ಪಂಡಿತರಿಗೂ, ವೀರರಿಗೂ ತುಂಬಾ ಬಹುಮಾನವನ್ನು ಕೊಟ್ಟು ಸಂತೋಷಪಡಿಸುತ್ತಿದ್ದನು. ಹಾಗೆಯೇ ಬೀರಬಲನಿಗೂ ತುಂಬಾ ಮೆಚ್ಚುಳಿಕೆಗಳನ್ನು ಕೊಡುತ್ತಾ-"ಎಷ್ಟಾದರೂ ಕೊಡುವವನ ಕೈ ಮೇಲೆಯೇ, ತೆಗೆದುಕೊಳ್ಳುವ ವನ ಕೈ ಕೆಳಗೇ" ಎಂದನು ಮುಗುಳು ನಗುತ್ತಾ.

"ಕೆಲವೊಮ್ಮೆ ಕೊಡುವವರ ಕೈಯೇ ಕೆಳಗಾಗಿ ತೆಗೆದುಕೊಳ್ಳುವವನ ಕೈಯೇ ಮೇಲಾಗು ವುದೂ ಉಂಟು" ಎಂದನು ಬೀರಬಲ. "ಹೇಗೆ?" ಎಂದು ಬಾದಷಹನು ಕೇಳಿದನು.

"ನಸ್ಯ ಸೇದದೆ ಹೇಳಲಾಗುವುದಿಲ್ಲವಲ್ಲಾ! ನನ್ನ ನಸ್ಯ ಬುರುಡೆ ಮನೆಯಲ್ಲಿಯೇ ಮರೆತು ಬಂದೆ" ಎಂದನು ಬೀರಬಲ.

"ಇಗೋ ಸೇದು" ಬಾದಷಹನೇ ತನ್ನ ಬಂಗಾರದ ನಸ್ಯ ಬುರುಡೆಯನ್ನು ಮುಂದೆ ನೀಡಿ ದನು. ಅದನ್ನು ಮೇಲಿನಿಂದ ತೆಗೆದುಕೊಳ್ಳುತ್ತಾ ಬಿರಬಲನೆಂದ—"ತಮ್ಮ ಪ್ರಶ್ನೆಗೆ ಇದೇ ದೃಷ್ಟಾಂತ!" ಕೇಳಿ, ಎಲ್ಲರೂ ಮೆಚ್ಚಿದರು. ಬಾದಷಹನೂ ತುಂಬಾ ಮೆಚ್ಚಿದನು.

ಟಿ. ಎಸ್. ಮಾಧವಿ, ಕುಸ್ನಾಡು

## ಉತ್ತರ ಹೇಳು

೧. ಢಿಲ್ಲೀ ನಗರಕ್ಕೆ ಪೂರ್ವದಲ್ಲಿ ಏನು ಹೆಸರು ?
(ಅ) ಪಾಟಲಿಪುತ್ರ
(ಆ) ಹಸ್ತಿನಾವತಿ
(ಇ) ರಾಜಗೃಹ

೨. ಬೌದ್ಧ ಮತವನ್ನು ಸೇರಿದ ಹಿಂದೂ ಚಕ್ರವರ್ತಿ ಯಾರು ?
(ಅ) ಚಂದ್ರಗುಪ್ತ
(ಆ) ಸಮುದ್ರಗುಪ್ತ
(ಇ) ಅಶೋಕ

೩. ಪ್ರಪಂಚದೊಳಗೆಲ್ಲಾ ದೊಡ್ಡ ಜೀವಿ ಯಾವುದು ?
(ಅ) ತಿಮಿಂಗಲ
(ಆ) ಆನೆ
(ಇ) ಜಿರಾಫೆ

೪. ಸಂಸ್ಕೃತದಲ್ಲಿ ಆದಿಕವಿ ಯಾರು ?
(ಅ) ವಾಲ್ಮೀಕಿ
(ಆ) ಕಾಳಿದಾಸ
(ಇ) ವ್ಯಾಸ

೫. ಸತ್ಯಾಗ್ರಹವು ಪ್ರಾರಂಭವಾದುದು ಎಲ್ಲಿ ?
(ಅ) ಬಿಹಾರ್
(ಆ) ದಕ್ಷಿಣಾಫ್ರಿಕಾ
(ಇ) ಗುಜರಾತ್

೬. ರೇಡಿಯೋ ಕಂಡುಹಿಡಿದ ಮಾರ್ಕೋನೀ ಯಾವ ದೇಶದವ ?
(ಅ) ಬ್ರಿಟನ್
(ಆ) ಫ್ರಾನ್ಸ್
(ಇ) ಇಟಲಿ

[ಉತ್ತರ 58 ನೇ ಪುಟದಲ್ಲಿ]

## —: ನಗೆ ಹನಿ :—

ಪೋಲೀಸ್ ಇನ್ಸ್‌ಪೆಕ್ಟರ್:—ನೀನೇಕೆ ಕಳ್ಳನನ್ನು ಹಿಡಿಯಲಿಲ್ಲ ?

ಪೋಲೀಸ್:—ನಾನು ಕಳ್ಳನನ್ನು ಹಿಂಬಾಲಿಸುತ್ತ ಓಡಿದಾಗ, ಅವನೊಂದು ಮನೆಯೊಳಗೆ ಹೊಕ್ಕ. ಅಲ್ಲಿಯ ಬಾಗಿಲಲ್ಲಿ ಪ್ರವೇಶಿಸಬಾರದು ಎಂದು ಬರೆದಿತ್ತು ಸಾರ್.

*　*　*

ಉಪಾಧ್ಯಾಯ:—ಸೂರ್ಯ ಗ್ರಹಣವಾಗುವಾಗ ಏನು ಕಂಡುಬರುತ್ತದೆ ?

ವಿದ್ಯಾರ್ಥಿ:—ಅನೇಕರು ಅದನ್ನು ನೋಡುತ್ತಿರುವುದು ಕಂಡುಬರುತ್ತದೆ.

*　*　*

ಉಪಾಧ್ಯಾಯ:-ಬತ್ತಿಹೋದ ನದಿಗಳು ಎಲ್ಲಿವೆ ?

ವಿದ್ಯಾರ್ಥಿ:—ಭೂಪಟದಲ್ಲಿ....

ಕೆ. ಎಚ್. ಆಲಿ, ಮಂಗಳೂರು

## ಚುಟಕ

ಶಾರದೆ ಹೆಸರು, ಕರೆವುದು ಸಾರು
ಹೇಳ್ವಳು ದೂರು, ಮಾಡ್ವಳು ಸಾರು
ಅದುಬಲು ನೀರು, ಖಾರವು ಜೋರು,
ಬಿಡುವೆನು ಕಣ್ಣೀರು! ಕುಡಿವೆನು ತಣ್ಣೀರು!

*　*　*

ಕೊಚ್ಚೆಯಲ್ಲಿ ಹುಟ್ಟಿ ನೊಣ,
ಹೊಲಸು ತಿಂದು ಉಬ್ಬಿಕಣಾ !
ಜೊಂಯೆಂದು ಹಾರಿಬಂದು
ಬಲೆಗೆ ಬಿದ್ದು ಸತ್ತಿತು.

ಶ್ರೀ ಕೃಪಾ, ಬೆಂಗಳೂರು

# ಹಿಂಬದಿಯ ಚಿತ್ರ

ಆ ಹಸ್ತಗಳು ಸದಯಸೇನನನ್ನು ಒಂದು ಅತ್ಯಂತ ಸುಂದರವಾದ ಕೋಣೆಯೊಳಗೆ ಕರೆದೊಯ್ದುವು. ಚೆಂದಾಗಿ ತಲೆ ಬಾಚಿದುವು. ಬೆಲೆಬಾಳುವ ರಾಜಭೂಷಣಗಳಿಂದ ಅಲಂಕರಿಸಿದುವು. ಇಂತಹ ಅಲಂಕಾರಗಳನ್ನು ಸದಯ ಸೇನನು ಎಂದೂ ಕಂಡಿರಲಿಲ್ಲ.

ಅನಂತರ ಮತ್ತೆ ಕೆಲವುಕೈಗಳು ಬಂದು ಅವನನ್ನು ಇನ್ನೊಂದು ಬ್ರಹ್ಮಾಂಡವಾದ ಕೋಣೆಯೊಳಗೆ ಕರೆದೊಯ್ದುವು. ಅಲ್ಲಿ ದೊಡ್ಡ ಔತಣಕ್ಕೋಸ್ಕರ ಅದ್ಭುತವಾದ ಏರ್ಪಾಡಾಗಿದ್ದುವು. ಮಧ್ಯದಲ್ಲಿ ಇಬ್ಬರು ದೊಡ್ಡವರಿಗಾಗಿ ಎರಡು ಸಿಂಹಾಸನಗಳು ಪ್ರತ್ಯೇಕ ಇದ್ದುವು. ಅವುಗಳಲ್ಲೊಂದರಮೇಲೆ ಸದಯಸೇನನ್ನು ಕುಳ್ಳಿರಿಸಿದುವು ಆ ಕೈಗಳು.

ಆ ಎರಡನೇ ಪೀಠದಲ್ಲಿ ಯಾವದೊಡ್ಡವನು ಬರುತ್ತಾನೋ ಎಂದು ಯೋಚಿಸುತ್ತಿದ್ದನು. ಆಗ ಅಮಿತ ವೈಭವದಿಂದ ಉತ್ಸವದ ಮೆರೆವಣಿಗೆಯಂತೆ ಅನೇಕ ಬೆಕ್ಕುಗಳು ಗುಂಪುಗುಂಪಾಗಿ ಬಂದುವು. ಅದರಲ್ಲೊಂದು ಬಿಳೀ ಬೆಕ್ಕು ರಾಜಭೂಷಣದಿಂದ ಒಪ್ಪುತ್ತಿತ್ತು. ಕೆಲಬೆಕ್ಕುಗಳ ಕೈಯಲ್ಲಿ ಬಂಗಾರದ ಪಂಜರಗಳಲ್ಲಿ ಇಲಿಗಳಿದ್ದುವು. ಬಿಳೀಬೆಕ್ಕು ಸಿಂಹಾಸನದಲ್ಲಿ ಕುಳಿತಿತು. ಮತ್ತು ಸದಯಸೇನನಿಗೆ ಹೆಸರು ಹೇಳಿ ಕರೆಯುತ್ತಾ ಸ್ವಾಗತವಿತ್ತಿತು. 'ನಿಮಗೋಸ್ಕರವೇ ಕಾಯುತ್ತಿದ್ದೆ' ಎಂದು ಹೇಳಿತು. ನಂತರ ರಾಜೋಪಚಾರದ ಔತಣ ನಡೆಯಿತು. ಅಪಾರ ಬುದ್ಧಿಯುಳ್ಳ ಆ ರಾಜಬೆಕ್ಕು ಸದಯಸೇನನನ್ನು ಮತ್ತೊಂದು ಸುಂದರಕೋಣೆಗೆ ಕರೆದೊಯ್ದಿತು.

ಅಲ್ಲಿ ಒಂದು ಚಿತ್ರಪಟವಿದ್ದಿತು. ಸದಯಸೇನನು ಸಮೀಪಹೋಗಿ ನೋಡಿದಾಗ ಅದು ತನ್ನ ಪಟವೇ ಎಂದು ತಿಳಿಯಿತು. ಅದನ್ನು ಅವನಿಗೆ ತೋರಿಸುತ್ತಾ ಬಿಳೀ ಮಾರ್ಜಾಲವು ಏನೋ ಚಿಂತಿಸುತ್ತಿತ್ತು.

ನಂತರ ಸಂಗೀತವೂ ನಾಟ್ಯವೂ ನೃತ್ಯವೂ ಜರುಗಿದುವು. ಸದಯಸೇನನಿಗೆ ನಿದ್ದೆಬಂತು. ಎದ್ದಮೇಲೆ ಮತ್ತೆ ಉಪಾಹಾರ ಉಪಚಾರಗಳೆಲ್ಲಾ ಜರುಗಿದುವು. ಸದಯಸೇನನು ತನ್ನ ಕಾರ್ಯವನ್ನು ನೆನೆದು, ಹಿರಿಯ ಮಾರ್ಜಾಲಿಯೊಡನೆ ಹೇಳಿಕೊಂಡನು. 'ಇನ್ನು ಹೊರಡುವೆನು' ಎಂದು ಅನುಮತಿ ಕೇಳಿದನು.

'ಈ ಸಣ್ಣ ಕಾರ್ಯಕ್ಕಾಗಿ ಚಿಂತೆಯೇಕೆ? ಇದೋ' ಎಂದು ಆ ಮಾರ್ಜಾಲವು ತನ್ನ ಪೆಟ್ಟಿಗೆಯೊಳಗಿಂದ, ಒಂದು ಸಣ್ಣ ನಾಯಿಯ ಬೊಂಬೆಯನ್ನೆತ್ತಿ ಅವನಿಗೆ ಕೊಟ್ಟಿತು. ಇನ್ನೂ ಕೆಲವುದಿನ ಇಲ್ಲಿಯೇ ಇರುವಂತೆ ಆ ಬಿಳೀಬೆಕ್ಕು ತುಂಬಾ ಕೇಳಿಕೊಂಡಿತು. 'ಮತ್ತೆ ಬರುತ್ತೇನೆ' ಎಂದು ಹೇಳಿ ಸದಯಸೇನನು ಅಲ್ಲಿಂದ ಹಿಂದಿರುಗಿದನು.

## ಉತ್ತರಹೇಳು - ಉತ್ತರ

| | |
|---|---|
| ೧. ಹಸ್ತಿನಾವತಿ | ೪. ವಾಲ್ಮೀಕಿ |
| ೨. ಅಶೋಕ | ೫. ದಕ್ಷಿಣಾಫ್ರಿಕಾ |
| ೩. ತಿಮಿಂಗಿಲ | ೬. ಇಟಲಿ |

ಕಳೆದ ತಿಂಗಳು 'ಚಂದಮಾಮ' 25 ನೇ ಪುಟದ 'ಭೂಗೋಳವೃತ್ತಾಂತ' ಉತ್ತರ:

| | | | |
|---|---|---|---|
| ಬಲ್ಗೇರಿಯಾ | 14 | ಇಟಲಿ | 13 |
| ಫ್ರಾನ್ಸ್ | 11 | ಸ್ಪೆಯಿನ್ | 20 |
| ಹಾಲೆಂಡ್ | 3 | ಇಂಗ್ಲಂಡು | 18 |
| ರುಮೇನಿಯಾ | 5 | ಹಂಗೇರಿ | 10 |
| ಜೆಕೊಸ್ಲೊವೇಕಿಯಾ | 2 | ಪೋಲೆಂಡ್ | 12 |
| ಗ್ರೀಸ್ | 17 | ಯುಗಸ್ಲಾವಿಯಾ | 8 |

'ತಲೆತೆಗೆದರೆ' ಉತ್ತರ:

(ತೊ) ಗರಿ, (ಕ) ದನ, (ಭೂ) ಸುರ, (ನಾ) ಪಿತ, (ವ) ಸತಿ, (ವಿ) ನಾಯಕ.

'ಕಿಟ್ಟುವಿನ ಕವನದ' ಬಿಟ್ಟ ಪದ:

೧. ಏಟು, ೨. ಮಳೆ, ೩. ಕಡೆಗಾಲ, ೪. ಮಗ್ನ, ೫. ರೇಷನ್, ೬. ಕಂಟ್ರೋಲು, ೭. ಕವನ.

ಏಕೆ? - ಉತ್ತರ:

೧. ದೇಹದೊಳಗೆ ವಾಯು ತುಂಬಿಕೊಳ್ಳುವುದರಿಂದ.

೨. ಕಡಲು ನೀರು ಉಪ್ಪಾಗಿರುವುದರಿಂದ.

## ಫೋಟೋ ಶೀರ್ಷಿಕೆಯ ಸ್ಪರ್ಧೆ

ಏಪ್ರಿಲ್ ಫೋಟೋಗಳ ಫಲಿತಾಂಶ:

ಏಪ್ರಿಲ್ ತಿಂಗಳ ಚಂದಮಾಮದಲ್ಲಿ ಪ್ರಕಟಿಸುವ ಫೋಟೋಗಳಿಗೆ ನಮಗೆಬಂದ ಶೀರ್ಷಿಕೆಗಳಲ್ಲಿ ಉತ್ತಮವಾಗಿರುವ ಈ ಕೆಳಗಿನ ಶೀರ್ಷಿಕೆಗಳಿಗೆ ಬಹುಮಾನವೆಂದು ನಿರ್ಣಯಿಸಲಾಗಿದೆ.

ಶೀರ್ಷಿಕೆ:

ಮೊದಲನೇ ಫೋಟೋ:

"ಹಾಲೂ ಮೊಸರೂ ಬೇಕಂತೆ!"

ಎರಡನೇ ಫೋಟೋ:

"ಹುಲ್ಲೂ ಚಿಗುರೂ ಸಾಕಂತೆ!"

ಕಳಿಸಿದವರು:

ಎಚ್. ಲಕ್ಷ್ಮೀನಾರಾಯಣ, ಬಳ್ಳಾರಿ

ಬಹುಮಾನಪಡೆದ ಈ ಶೀರ್ಷಿಕೆಗಳನ್ನು, ಕಳುಹಿಸಿದವರ ಹೆಸರಿನೊಂದಿಗೆ, ಏಪ್ರಿಲ್ ಚಂದಮಾಮದಲ್ಲಿ ಪ್ರಕಟಿಸುತ್ತೇವೆ. ಬಹುಮಾನದ ಮೊಬಲಗು ರೂ. 10/-ನ್ನು ಏಪ್ರಿಲ್ ಸಂಚಿಕೆ ಹೊರಟಕೂಡಲೇ ಕಳುಹಿಸಲ್ಪಡುತ್ತದೆ.

★

## ಮೇ ತಿಂಗಳಲ್ಲಿ

ಪ್ರಕಟಿಸುವ ಫೋಟೋಗಳ ಮಾದರಿಯನ್ನು ವಿವರಗಳೊಂದಿಗೆ ಪಕ್ಕದ ಪುಟದಲ್ಲಿ ನೋಡಿ.

### ಮುಖ್ಯ ಸೂಚನೆ:

ನೀವು ಕಳುಹಿಸುವ ಶೀರ್ಷಿಕೆಗಳನ್ನು ಆಚೆಯ ಪುಟದ ಕೂಪನಿನಲ್ಲೇ ಬರೆದು ಕಳಿಸಬೇಕು. ಅದನ್ನು ಕತ್ತರಿಸಿ ಕವರಿನಲ್ಲಿ ಹಾಕಿ ಮುಚ್ಚದೆ, 0-0-9 ಸ್ಟಾಂಪು ಹಚ್ಚಿ ಬುಕ್‌ಪೋಸ್ಟ್‌ಮೂಲಕ ಕಳಿಸಿ. ಪತ್ರವೇನೂ ಇಡಬೇಡಿ.

# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1953 ಮೇ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





★ ಮೇಲಿನ ಎರಡು ಫೋಟೋಗಳಿಗೆ ಸರಿ ಹೋಗುವ ಶೀರ್ಷಿಕೆಗಳು ಬೇಕು. ಮುದ್ದಾದ ಒಂದು ಮಾತಾಗಲೀ, ಎರಡು ಮೂರು ಶಬ್ದಗಳ ಒಂದು ವಾಕ್ಯವಾಗಲೀ ಇರಬಹುದು. ಎರಡು ಫೋಟೋಗಳಿಗೂ ಸಂಬಂಧಿಸಿದ ಮಾತಾಗಿರಬೇಕು.

★ ಮಾರ್ಚಿ 10ನೇ ತಾರೀಕಿನೊಳಗೆ ಶೀರ್ಷಿಕೆಗಳು ನಮಗೆ ಸೇರಬೇಕು. ಆಮೇಲೆ ಬಂದವುಗಳನ್ನು ಖಂಡಿತ ಪರಿಶೀಲಿಸಲಾಗದು.

★ ನಮಗೆ ಬಂದ ವಾಕ್ಯಗಳಲ್ಲಿ ಅತ್ಯುತ್ತಮವಾದ ಒಂದು ಜತೆ (ಅಂದರೆ ಎರಡು ಶೀರ್ಷಿಕೆಗಳಿಗೂ ಸೇರಿ) ರೂ. 10/- ಬಹುಮಾನವಾಗಿ ಕೊಡಲ್ಪಡುತ್ತದೆ.

★ ಕೆಳಗಿನ ಕೂಪನ್‌ನಲ್ಲಿ ಎರಡು ಶೀರ್ಷಿಕೆಗಳನ್ನು ಬರೆದು ತುಂಬಿಸಿ, ಈ ವಿಳಾಸಕ್ಕೆ ಕಳಿಸಬೇಕು: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.

★ ಚಂದಮಾಮ ಕೂಪನ್ ಹೊರತು ಬೇರೆ ವಿಧವಾಗಿ ಕಳಿಸುವ ಶೀರ್ಷಿಕೆಗಳು ಖಂಡಿತ ಸ್ವೀಕರಿಸಲ್ಪಡುವುದಿಲ್ಲ.

→ ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಕೂಪನ್ ←

ಮೊದಲನೇ ಫೋಟೋ ಎರಡನೇ ಫೋಟೋ

ಶೀರ್ಷಿಕೆ................................ ಶೀರ್ಷಿಕೆ................................

ಕಳಿಸಿದವರ ಹೆಸರು................................................

ಪೂರ್ಣ ವಿಳಾಸ................................................

May '53

ಬರುತ್ತದೆ!

ವಿಜಯ ರವರ

# ಚಂದ್ರಹಾರಂ

ದಿಗ್ದರ್ಶಕರು

ಕೆ. ಕಾಮೇಶ್ವರರಾವ್ B.A.



ನಿರ್ಮಾಪಕರು...ನಾಗಿರೆಡ್ಡಿ...ಚಕ್ರಪಾಣಿ

Printed by B. NAGI REDDI at the B. N. K. Press Ltd., Madras 26, and Published by him
... Publications, Madras 26. Controlling Editor: SRI CHAKRAPANI.

Photo by Pranlal K. Patel



ಬಹುಮಾನ
ಪಡೆದ ಶೀರ್ಷಿಕೆ

ಗ್ರಹಗಳನ್ನು ಎಣಿಸುತ್ತಾ

ಕಳಿಸಿದವರು:
ಎಸ್. ವಿಶ್ವನಾಥ, ಶ್ರೀರಂಗಪಟ್ಟಣ




ಬಣ್ಣದ ಚಿತ್ರ ಕಥೆ—ಚಿತ್ರ – 3